

ನ್ 1988



# ಸಪ್ತಗಿರಿ

ಬೆಲೆ : ರೂ ೧

Bill copy
June 1988



ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸ ಪತ್ರಿಕೆ

# ANNAMACHARYA JAYANTHI CELEBRATIONS AT HYDERABAD



Sri Ch. Venkatapathi Raju, I.A.S., Executive Officer, T.T.D. welcoming the gathering.



Sri P. Venkateswara Rao, Editor, Andhra Prabha, Receiving the memento from Sri J.R. Pushparaj, The Minister for Sports of Andhra Pradesh.



Smt. G. Shoba Raju's Vocal Concert



Sri D. Sitaramaiah, Chairman, T.T.D. Board, felicitating Kumari Sobha Naidu



Sri D. Sitaramaiah releasing the T.T.D. Publications



Sri S. Satyanarayana, Minister for Endowments, A.P. releasing the Annamacharya Cassettes



ಭೂಷಣಕೆ ಭೂಷಣ ಇದು
ಶೇಷಗಿರಿವಾಸ ಶ್ರೀವರ ವೇಂಕಟೇಶ ॥ ಪ ॥

ನಾಲಿಗೆಗೆ ಭೂಷಣ ನಾರಾಯಣ ನಾಮ
ಕಾಲಿಗೆ ಭೂಷಣ ಹರಿಯಾತ್ರೆಯು
ಆಲಯಕೆ ಭೂಷಣ ತುಲಸಿ ಬೃಂದಾವನ ವಿ
ಶಾಲ ಕರ್ಣಕೆ ಭೂಷಣ ವಿಷ್ಣು ಕಥೆಯು –1–

ದಾನವೇ ಭೂಷಣ ಇರುವ ಹಸ್ತಂಗಳಿಗೆ
ಮಾನವೇ ಭೂಷಣ ಮಾನವರಿಗೆ
ಜ್ಞಾನವೇ ಭೂಷಣ ಮುನಿಯೋಗಿವರರಿಗೆ
ಮಾನಿನಿಗೆ ಭೂಷಣ ಪತಿಭಕ್ತಿಯು –2–

ರಂಗನನು ನೋಡುವುದೇ ಕಂಗಳಿಗೆ ಭೂಷಣ
ಮಂಗಳಾಂಗಗೆ ಮಣಿವ ಶಿರ ಭೂಷಣ
ಶೃಂಗಾರ ತುಲಸಿ ಮಣಿ ಕೊರಳಿಗೆ ಭೂಷಣ
ರಂಗ ವಿಠಲ ನಿಮ್ಮ ನಾಮ ಅತಿ ಭೂಷಣ

— ಶ್ರೀ ಶ್ರೀಪಾದರಾಯರು.



ಸಂಪುಟ ೧೯]　　　ಜೂನ್ ೧೯೮೮　　　[ಸಂಚಿಕೆ ೧

ಗೌರವ ಸಂಪಾದಕರು :

ಶ್ರೀ ಸಿ.ಎಚ್. ವೆಂಕಟಪತಿರಾಜು ಐ.ಎ.ಎಸ್.,

ಸಂಪಾದಕ :

ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :

ಪಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲ ತಿರುಪತಿ ದೇವಸ್ಥಾನಗಳು,
ತಿರುಪತಿ

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ　　-ಸಂ॥

# ವಿಷಯಸೂಚಿ



ಮುಖಚಿತ್ರ . ಧಾರ್ಮಿಕ ಸಾಹಿತ್ಯ ಸೃಷ್ಟಿ　　ಚಿತ್ರ – ಆರ್. ಬಾಬುನಾಥ್.

ಹಿಂಬದಿಯಲ್ಲಿ : ಸಾಕ್ಷಾತ್ಕಾರ ವೈಭವಂ.

ಒಳಗಡೆ : ತಾಳ್ಳಪಾಕ ಅನ್ನಮಾಚಾರ್ಯರ 580 ನೇ ಜಯಂತಿ ಚಿತ್ರಗಳು.

# ಸಂಪಾದಕೀಯ

ಕತ್ತಲಿನಿಂದ ಬೆಳಕಿಗೆ. ಅಸತ್ತಿನಿಂದ ಸತ್ತಿಗೆ, ಮೃತ್ಯುವಿನಿಂದ ಅಮೃತತ್ವಕ್ಕೆ ಹೋಗಲು ಮನುಷ್ಯ ಮೊದಲಿನಿಂದ ಪ್ರಯತ್ನ ಪಡುತ್ತಲೇ ಇದ್ದಾನೆ. ಈ ದಿಸೆಯಲ್ಲಿ ಕೆಲವರು ಕೆಲವು ಹಂತಗಳವರೆಗೆ ಸಾಗಿದ್ದೂ ಉಂಟು. ಆ ಹಿರಿಯ ಚೇತನಗಳು ತಾವು ಸಾಧನೆಯ ದಾರಿಯಲ್ಲಿ. ಸಿದ್ಧಿಯ ಸಂತೃಪ್ತಿಯಲ್ಲಿ, ಕಂಡದ್ದನ್ನು ಜೊತೆಯವರಿಗೂ ಮನಗಾಣಿಸಲು ಮಾತನ್ನು ಬಳಸಿದರು. ಅನುಭವಾತೀತವಾದದ್ದನ್ನು ಅನಂತವಾದದ್ದನ್ನು. ಇಂದ್ರಿಯಾತೀತ ವಾದದ್ದನ್ನು, ಈಶ್ವರನನ್ನು ಸೀಮಿತವಾದ ಭಾಷಾ ಮಾಧ್ಯಮದಲ್ಲಿ ಹಿಡಿದು ಕೊಡಲು ಪ್ರಯತ್ನ ಪಟ್ಟರು. ಮಾತು ಬರಹಕ್ಕೆ ಇಳಿದ ಮೇಲೆ ಮುಂದಿನ ತಲೆಮಾರುಗಳಿಗೂ ಮಾರ್ಗದರ್ಶಿಯಾಗುವಂತಹ ಸಾಹಿತ್ಯ ವಿವರಗಳು ಪರಂಪರೆಯಾದವು. ಮುಂದೆ ಕಾಗದ, ಮುದ್ರಣ, ಸಾರಿಗೆ–ಎಲ್ಲ ಆಧುನಿಕ ತಂತ್ರಜ್ಞಾನವೂ ಈ ಮೂಲಭೂತವಾದ ಆಧ್ಯಾತ್ಮಿಕ ಸಂದೇಶಕ್ಕೆ ವಾಹಕಗಳಾಗುವಂತೆ ಆದ ಮೇಲೆ ಮಾನವೀಯತೆಯ ಮೂಲ ಧರ್ಮ, ಮೌಲ್ಯ. ಸಾರ್ವತ್ರಿಕ ಸತ್ಯಗಳು ಸರ್ವರಿಗೂ ದೊರಕುವಂತೆ ಮಾಡುವಲ್ಲಿ, ಆರ್ಷೇಯ ವಿಜ್ಞಾನವನ್ನು ಅರ್ವಾಚೀನ ಸಮಾಜದಲ್ಲಿ ಪ್ರಸಾರ ಮಾಡುವಲ್ಲಿ. ಹಲವಾರು ಸಂಘ. ಸಂಸ್ಥೆ. ವ್ಯಕ್ತಿ, ವಿಶ್ವ ವಿದ್ಯಾಲಯ, ಮಠ, ಗುಡಿಗಳು ಪ್ರಯತ್ನ ನಡೆಸುತ್ತ ಮುಂದುವರೆದಿರುವುದನ್ನು ಈಗ ಕಾಣಬಹುದಾಗಿದೆ.

ತಿ. ತಿ. ದೇ. ಗಳು ಕೂಡ ಈ ಜ್ಞಾನ ಪ್ರಸಾರ ಕಾರ್ಯದಲ್ಲಿ ಹೊರತಲ್ಲ. ಸಾರ್ವಜನಿಕ ಶಿಕ್ಷಣಕ್ಕಾಗಿ ಶಾಲಾ ಕಾಲೇಜುಗಳನ್ನು ನಡೆಸುತ್ತಿರುವುದಷ್ಟೆ ಅಲ್ಲದೆ, ಸಾಹಿತ್ಯಕ ಸಾಂಸ್ಕೃತಿಕ ಧಾರ್ಮಿಕ ಪರಂಪರೆಯನ್ನು ಮುಂದುವರಿಸಿಕೊಂಡು ಹೋಗುವುದರಲ್ಲಿಯೂ ಹಲವು ಹನ್ನೊಂದು ಶಾಖೋಪಶಾಖೆಗಳಲ್ಲಿ ಕೆಲಸ ಮಾಡುತ್ತಿದೆ. ಅಂತಹ ಶಾಖೆಗಳಲ್ಲಿ ಧಾರ್ಮಿಕ ಗ್ರಂಥ ಪ್ರಕಾಶನವೂ ಒಂದು.

ತಿ ತಿ ದೇ. ಧಾರ್ಮಿಕ ಕೃತಿಗಳ ಪ್ರಕಟನೆಯಲ್ಲಿ ಬಹುಕಾಲದಿಂದ ಶ್ರಮಿಸುತ್ತ ಇದೆ. ಅನ್ನಮಾಚಾರ್ಯರ ಕೃತಿಗಳು, ವೇದಗಳು, ಉಪನಿಷತ್ತುಗಳು, ರಾಮಾಯಣ, ಭಾರತ, ಭಗವದ್ಗೀತೆ–ಮೊದಲಾದ ಸಾರ್ವಕಾಲಿಕ ಮೌಲಿಕ ಕೃತಿಗಳನ್ನು ಮುದ್ರಿಸಿ ವಿತರಿಸಿ ಶ್ರೀವೆಂಕಟೇಶ್ವರಸ್ವಾಮಿಯ ಭಕ್ತ ಭಾಗವತರಿಗೆ ಜ್ಞಾನದಾಸೋಹವನ್ನೇರ್ಪಡಿಸುವ ಕೆಲಸದಲ್ಲಿ ತನ್ನನ್ನು ತಾನು ತೊಡಗಿಸಿಕೊಂಡು ಕೆಲಸಮಾಡುತ್ತಿದೆ. ಧಾರ್ಮಿಕ ಗ್ರಂಥ ಪ್ರಕಟನೆಗೆ ಲೇಖಕರಿಗೆ ನೆರವು ನೀಡುವುದೇ ಅಲ್ಲದೆ, ಅತ್ಯಾಧುನಿಕ ಮುದ್ರಣ ಸೌಲಭ್ಯಗಳನ್ನು ಹೊಂದಿದ ತಿ ತಿ ದೇ. ಮುದ್ರಣಾಲಯದಲ್ಲಿ ನೂರಾರು ಪುಸ್ತಕಗಳನ್ನು ಅಚ್ಚಿಸಿ ಜನಕ್ಕೆ ನೀಡುತ್ತಿದೆ

ಪುಸ್ತಕಗಳ ಬೆಲೆಯನ್ನು ನಿರ್ಧರಿಸುವಾಗ ಕಡಿಮೆ ದರಗಳನ್ನು ಸೂಚಿಸುವುದೇ ಅಲ್ಲದೆ, ಈ ಮುಖಬೆಲೆಯ ಮೇಲೂ ಆಕರ್ಷಕವಾದ ರಿಯಾಯಿತಿಗಳನ್ನು ಪುಸ್ತಕ ಮಾರಾಟಗಾರರಿಗೂ, ಒಟ್ಟಿಗೆ ಕೊಳ್ಳುವವರಿಗೂ ನೀಡುತ್ತಿದೆ ಜೊತೆಗೆ ಧಾರ್ಮಿಕ ಸಮಾರಂಭಗಳು ವಿಶೇಷ ಉತ್ಸವಗಳ ಕಾಲದಲ್ಲಿ ಪುಸ್ತಕ ಪ್ರದರ್ಶನ ಮಾರಾಟಗಳನ್ನು ಏರ್ಪಡಿಸಿ. ರಿಯಾಯಿತಿ ದರಗಳಲ್ಲಿ ಶ್ರೀಸಾಮಾನ್ಯನೂ ಪ್ರತ್ಯೇಕವಾಗಿ ಪುಸ್ತಕ ಕೊಳ್ಳಲು ಅನುಕೂಲವಾಗುವಂತೆ ವ್ಯವಸ್ಥೆ ಮಾಡಲಾಗಿದೆ

ಈ ಎಲ್ಲ ಪ್ರಯತ್ನಗಳ ಹಿಂದಿನ ಮೂಲ ಉದ್ದೇಶ ಸರ್ವರಿಗೂ ಧಾರ್ಮಿಕ ಸಾಹಿತ್ಯ ಕೈಕಚ್ಚದೆ ದೊರಕುವಂತಾಗಿ ಅತಿ ಹೆಚ್ಚಿನ ಜನ ಧಾರ್ಮಿಕ ಮೌಲ್ಯಗಳ ಲಾಭ ಪಡೆಯಬೇಕೆಂಬುದೇ ಆಗಿದೆ. ಇಂತಲ್ಲಿ ಈ ಎಲ್ಲ ಯೋಜನೆಗಳೂ, ಕ್ರಮಗಳೂ, ಸಾರ್ಥಕವಾಗುವುದು ಓದುಗರ ಭಕ್ತರ ಭಾಗವಹಿಸುವಿಕೆಯಿಂದಾಗಿ ಮಾತ್ರ. ಜನ ಹೆಚ್ಚು ಹೆಚ್ಚು ಪುಸ್ತಕಗಳನ್ನು ಕೊಂಡು ಪ್ರಯೋಜನ ಪಡೆದಾಗಲೇ ಈ ಎಲ್ಲ ಕ್ರಮಗಳೂ ಅರ್ಥಪೂರ್ಣವಾಗುತ್ತದೆ. ಈ ದಿಸೆಯಲ್ಲಿ ತಿ. ತಿ. ದೇ. ಗಳ ಯೋಜನೆಗಳನ್ನು ಕಾರ್ಯಕ್ರಮಗಳನ್ನು ಓದುಗರಿಗೆ ತಿಳಿಸುವ ಸಪ್ತಗಿರಿ ಪತ್ರಿಕೆ ಹದಿನೆಂಟು ವರ್ಷಗಳಿಂದ ಸೇವೆಸಲ್ಲಿಸುತ್ತಿದ್ದು 19 ನೇ ವರ್ಷವನ್ನು ಪ್ರವೇಶಿಸಿದೆ. ಹೆಚ್ಚು ಹೆಚ್ಚು ಜನವನ್ನು ತಲುಪುತ್ತ ಇನ್ನೂ ಹೆಚ್ಚಿನ ಮಟ್ಟದ ಸೇವೆಗ ಅವಕಾಶ ಒದಗಿಸಿ ಕೊಳ್ಳಬೇಕಾದ ಅಗತ್ಯ - ಐದು ಭಾಷೆಗಳಲ್ಲಿ- ಕನ್ನಡ–ತೆಲುಗು–ಹಿಂದಿ, ಆಂಗ್ಲ–ತಮಿಳು- ಭಾಷೆಗಳಲ್ಲಿ ಪ್ರಕಟವಾಗುತ್ತಿರುವ ಸಪ್ತಗಿರಿಗೂ ಇದೆ. ಓದುಗರು ಸಹಕಾರ ನೀಡಿದಾಗ ಮಾತ್ರವೇ ಇದು ಸಾಧ್ಯವಾಗುತ್ತದೆ.

ಹೆಚ್ಚು ಹೆಚ್ಚಿನ ಭಾಗವತ ಸೇವೆಗೆ ಅವಕಾಶ ಮಾಡಿಕೊಡಲಿ ಎಂದು ಶ್ರೀವೆಂಕಟೇಶ್ವರಸ್ವಾಮಿಯಲ್ಲಿ ಬೇಡುವ

# ತಿ.ತಿ.ದೇ. ಧರ್ಮಕರ್ತರ ಮಂಡಳಿಯ ತೀರ್ಮಾನಗಳು 23-4-1988

ತಿ. ತಿ. ದೇ. ಗಳ ಶಾಲಾ ಕಾಲೇಜುಗಳ ಆಡಳಿತವನ್ನು ನೋಡುವ ತಿ. ತಿ. ದೇ. ಶಿಕ್ಷಣಾಧಿಕಾರಿ ಸ್ಥಾನಕ್ಕೆ ಇದುವರೆಗೆ ಪಡೆಯುತ್ತಿದ್ದ ಬದಲಿ ಸ್ಥಾನಗೆ ಬದಲಾಗಿ ನೇರ ನೇಮಕದಿಂದ ಅಭ್ಯರ್ಥಿಗಳನ್ನು ಹೊಂದಲು ತೀರ್ಮಾನಿಸಲಾಯಿತು.

* * * *

ತಿ. ತಿ. ದೇ. ಗಳ ಉದ್ಯಾನವನ ವಿಭಾಗ [illegible] ಉದ್ಯಾನಾಧಿಕಾರಿ ಶ್ರೀ [illegible] ಅವರ ಸ್ಥಾನವನ್ನು ಡೆಪ್ಯೂಟಿ ಡೈರೆಕ್ಟರ್ ಎಂದೇ ಇಂದಿ ಜಾಯಿಂಟ್ ಡೈರೆಕ್ಟರ್ ಎಂದಾಗಿ ಮಾರ್ಚಿ 1986 ಪುನರ್ ವಿಂಗಡಿತ ವೇತನ ಶ್ರೇಣಿಯನ್ನು ನೀಡಲು ತೀರ್ಮಾನಿಸಲಾಯಿತು.

*

[illegible]ನಲ್ಲಿರುವ ತಿ. ತಿ. ದೇ. ಕಲ್ಯಾಣ ಮಂಟಪದ ದಿನದ ಬಾಡಿಗೆಯನ್ನು 100 ರೂಗಳಿಂದ 300 ರೂಗಳಿಗೆ ಏರಿಸಲು ತೀರ್ಮಾನಿಸಲಾಯಿತು.

* * * *

ಮಹಬೂಬ್‌ನಗರದ ಗದ್ವಾಲದಲ್ಲಿ ತಿ. ತಿ. ದೇ. ಕಲ್ಯಾಣಮಂಟಪ ನಿರ್ಮಿಸುವ ವಿಷಯದಲ್ಲಿ ಅಲ್ಲಿನ ಪುರಸಭೆಯವರು ಒಂದು ಎಕರೆ ಜಮೀನನ್ನು ತಿ. ತಿ. ದೇ. ಗಳಿಗೆ ವಹಿಸಿಕೊಡುವಲ್ಲಿ, ಸದರಿ ಪುರಸಭೆಯ ಕಮೀಷನರ್ ಅವರು ಕಲ್ಯಾಣ ಮಂಟಪ ಸಮಿತಿಯಲ್ಲಿ ಸ್ಥಾಯೀ ಸದಸ್ಯರಾಗಿರುವ ನಿಬಂಧನೆಯನ್ನು ಒಪ್ಪಲಾಯಿತು.

* * * *

ಅಲಿಪಿರಿಯಲ್ಲಿನ ಅತಿಥಿ ಗೃಹದಲ್ಲಿ ಕೆಲಸ ಮಾಡಲು ಬೇಕಾದ ಸಿಬ್ಬಂದಿಯ ನೇಮಕಾತಿಗಾಗಿ ಅನುಮತಿಸಲು ಸರ್ಕಾರಕ್ಕೆ ಶಿಫಾರಸು ಮಾಡಲು ತೀರ್ಮಾನಿಸಲಾಯಿತು.

* * * *

ತಿರುಪತಿಯ ಎಸ್. ವಿ. ಆರ್. ಆರ್ ಆಸ್ಪತ್ರೆಯಲ್ಲಿನ ಕ್ಯಾನ್ಸರ್ ನಿವಾರಣಾ ವಿಭಾಗದಲ್ಲಿ ಮೂರು ರೇಡಿಯೋ ಆಕ್ಟೀವ್ ನೀಡಲ್‌ಗಳನ್ನು ಸಬ್ಸಿಡಿದರದಲ್ಲಿ ಬಾಬಾ ಆಟಾಮಿಕ್ ರಿಸರ್ಚ್ ಸೆಂಟರಿನಿಂದ ಕೊಳ್ಳಲು 1 83 ಲಕ್ಷ ರೂಗಳನ್ನೂ ಅವುಗಳಿಂದ ಚಿಕಿತ್ಸೆನಡೆಸಲು ಅಗತ್ಯವಾದ ಇತರ ಪರಿಕರಗಳನ್ನು ಕೊಳ್ಳಲು 1. ಲಕ್ಷ ರೂಗಳನ್ನು ದಾನವಾಗಿ ನೀಡಲು ತೀರ್ಮಾನಿಸಲಾಯಿತು.

* * * *

ತಿರುಮಲೆಯಲ್ಲಿ ಪ್ರತಿವರ್ಷವೂ ಬ್ರಹ್ಮೋತ್ಸವದ ಸಮಯದಲ್ಲಿ ಈ ಹಿಂದೆ ನಡೆಯುತ್ತಿದ್ದು ನಿಂತಿದ್ದ ಫಲಪುಷ್ಪ ಪ್ರದರ್ಶನವನ್ನು ಮತ್ತೆ ನಡೆಸಬೇಕೆಂದು ತೀರ್ಮಾನಿಸಲಾಯಿತು.

* * * *

ತಿರುಮಲೆಯಲ್ಲಿ ಆರ್ಜಿತ ಸೇವೆಗಳಲ್ಲಿ ಗೃಹಸ್ಥರಿಗೆ ಸಿಗುವ ಚಿಕ್ಕ [illegible] ಬಹುಮಾನವನ್ನು ಬಿಟ್ಟು, ಆ ಸೇವೆಗಳ ಶುಲ್ಕವನ್ನು ಇಳಿಸಲು ತೀರ್ಮಾನಿಸಲಾಯಿತು. ಇದರಂತೆ ಹೊಸ ಶುಲ್ಕ ಈ ರೀತಿ ಇರಬೇಕೆಂದು ತೀರ್ಮಾನವಾಯಿತು.

| ಸೇವೆ | ಹೊಸ ಶುಲ್ಕ |
|---|---|
| ತಿರುಪ್ಪಾವಡ | ರೂ [illegible]500/- |
| ಸಹಸ್ರದೀಪಾಲಂಕಾರಸೇವೆ | ರೂ [illegible]00/- |
| ಅಷ್ಟದಳಪಾದಪದ್ಮಾರಾಧನಸೇವೆ | ರೂ 3500/- |

* * * *

ತಿರುಮಲೆಯ ಕೊಳಗೇರಿ ನಿರ್ಮೂಲನಾ ಯೋಜನೆಯಲ್ಲಿ ಅಲಿಪಿರಿ ಪಾದಾಲ ಮಂಟಪದ ಒಳಗಿದ್ದ 30 ಕುಟುಂಬಗಳನ್ನು ಪೆರುಮಾಳ್ಳಪಲ್ಲಿ ರೆವಿನ್ಯೂ ಮಂಡಲಕ್ಕೆ ವರ್ಗಾಯಿಸಿದ್ದು, ಅವರ ಕೋರಿಕೆಯಂತೆ, ಇತರ ವರ್ಗಾಯಿತ ನಿವಾಸಿಗಳಿಗೆ ನೀಡಿದಂತೆಯೇ 96 ಚದರಗಜ ಸ್ಥಳವನ್ನು ಉಚಿತವಾಗಿ ನೀಡಿ, ಪ್ರತಿಕುಟುಂಬಕ್ಕೂ 500 ರೂಗಳ ತಾತ್ಕಾಲಿಕ ಗುಡಿಸಲು ನಿರ್ಮಾಣಸಹಾಯ ಧನ ನೀಡಲು ತೀರ್ಮಾನಿಸಲಾಯಿತು.

* * * *

ತಿರುಮಲೆಯಲ್ಲಿ ಅಂಗಡಿ, ಉಪಹಾರಗೃಹ, ಮೊದಲಾದವುಗಳನ್ನು 31-3-88 ಕ್ಕೆ ಅವುಗಳ ಲೈಸೆನ್ಸ್ ಮುಗಿದಿದ್ದರಿಂದ, ಅವುಗಳ ಲೈಸೆನ್ಸ್ ದರಗಳಲ್ಲಿ 15% ಹೆಚ್ಚಿಸಿ ಅಲ್ಲಿನ ನಿಜವಾದ ಹಾಗೂ ಅಧಿಕೃತವಾದ ಅಂಗಡಿದಾರರಿಗೇ ನೀಡಲು ತೀರ್ಮಾನಿಸಲಾಯಿತು.

* * * *

ತಿ. ತಿ ದೇ. ಗಳಲ್ಲಿ ಸ್ಥಪತಿಯಾಗಿ ಕಾರ್ಯ ನಿರ್ವಹಿಸುತ್ತಿದ್ದ ಶ್ರೀ ಎಸ್.ಕೆ.ಎಸ್. ಚಾರಿ ಅವರ ಉದ್ಯೋಗ ಕಾಲವನ್ನು ಮತ್ತೂ ಒಂದು ವರ್ಷ ಮುಂದುವರಿಸಲು ತೀರ್ಮಾನಿಸಲಾಯಿತು.

* * *

ನಲ್ಗೊಂಡದಲ್ಲಿ ತಿ. ತಿ. ದೇ. ಕಲ್ಯಾಣ ಮಂಟಪವನ್ನು ನಿರ್ಮಿಸಲು ಅಲ್ಲಿನ ಪುರಸಭಾಧಿಕಾರಿಯನ್ನು ಕಲ್ಯಾಣಮಂಟಪ ಸಲಹಾಸಮಿತಿಯ ಸ್ಥಾಯೀ ಸದಸ್ಯರನ್ನಾಗಿ ಹೊಂದಿ ಪುರಸಭೆಯ ನೆಲವನ್ನು ಪಡೆಯಬೇಕೆಂದು ತೀರ್ಮಾನಿಸಲಾಯಿತು.

* * * *

ತಿರುಮಲೆಯಲ್ಲಿನ ವಸತಿಗೃಹಗಳಲ್ಲಿ ಕೋಣೆಗಳಲ್ಲಿ ಹೆಚ್ಚಿನ ಮಂಚ ಹಾಸಿಗೆಗಳನ್ನು ಒದಗಿಸಿ ಹೆಚ್ಚು ಯಾತ್ರಿಕರಿಗೆ ಅನುಕೂಲ ಮಾಡಿಕೊಡಬೇಕೆಂದು ತೀರ್ಮಾನಿಸಲಾಯಿತು.

* * * *

ರಾಜಮಹೇಂದ್ರಿಯಲ್ಲಿ ತಿ. ತಿ. ದೇ. ಕಲ್ಯಾಣ ಮಂಟಪವನ್ನು ನಿರ್ಮಿಸಲು ಹಾಗೂ 1989-90 ರಲ್ಲಿ ಕೃಷ್ಣಾ ಜಿಲ್ಲೆಯ ಗುಂಗುಟೂರಿನಲ್ಲಿ ತಿ ತಿ ದೇ. ಕಲ್ಯಾಣಮಂಟಪವನ್ನು ನಿರ್ಮಿಸಲು ತೀರ್ಮಾನಿಸಲಾಯಿತು.

* * * *

ಶ್ರೀ ವೆಂಕಟೇಶ್ವರ ನಿತ್ಯ ಅನ್ನ ದಾನ ಯೋಜನೆಯನ್ನು ಜನಪ್ರಿಯಗೊಳಿಸಲು ಬಾನುಲಿ, ದೂರದರ್ಶನಗಳಲ್ಲಿ ಜಾಹೀರು ಮಾಡಬೇಕೆಂದು ತೀರ್ಮಾನಿಸಲಾಯಿತು.

* * * *

1989 ರ ಜನವರಿಯಲ್ಲಿ ತಿರುಪತಿಯಲ್ಲಿ ನಡೆಯುವ ಪರಿಸರದ ತಾಂತ್ರಿಕ ಪರಿಶೀಲನೆಯ ಅಂತರ ರಾಷ್ಟ್ರೀಯ ಸಮ್ಮೇಳನದಲ್ಲಿ ಭಾಗವಹಿಸುವ ವಿದೇಶೀಪ್ರತಿನಿಧಿಗಳಿಗೆ ನೆನಪಿನ ಕಾಣಿಕೆಯಾಗಿ ನೀಡಲು ಶ್ರೀಗಂಧದ, ಶೇಗದ, ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಪದ್ಮಾವತೀ ಅಮ್ಮನವರ ವಿಗ್ರಹಗಳನ್ನು ನೀಡಲು, 15000 ರೂಗಳನ್ನು ಮಂಜೂರು ಮಾಡಲು ತೀರ್ಮಾನಿಸಲಾಯಿತು.

* * * *

ಪ್ರತಿವರ್ಷವೂ ಆನಿವರ ಆಸ್ಥಾನದ ದಿನದಂದು ಸಂಜೆ ನಡೆಯುವ ಪುಷ್ಪಪಲ್ಲಕ್ಕಿ ಉತ್ಸವವನ್ನು ಆರ್ಜಿತ ಸೇವೆಯನ್ನಾಗಿ ಮಾಡಲು ತೀರ್ಮಾನಿಸಲಾಯಿತು.

# ಹರಿದಾಸ ಸಾಹಿತ್ಯ ಹಾಗೂ ಶ್ರೀಪಾದರಾಜರು

ಶ್ರೀ ಕೆ. ರಮಾನಂದ

ಪರಮಾತ್ಮನನ್ನು ನಾನಾ ವಿಧದಿಂದ ಸ್ತುತಿಸಿ ಅಪಾರವಾದ ಭಕ್ತಿಯನ್ನೂ ಶ್ರದ್ಧೆಯನ್ನೂ ಅವನಲ್ಲಿಟ್ಟವರು ಮಹನೀಯರಾದ ದಾಸಮಹಾನುಭಾವರಾಗಿದ್ದರು. ಶ್ರೀಹರಿಯ ದಾಸರಾಗಿ ನಾನಾ ತರಹದ ಹಾಡುಗಳಿಂದ ಪರಮಾತ್ಮನನ್ನು ಹೊಗಳಿ ಹೊಗಳಿ ತಣಿದ ದಾಸರುಗಳು ಕನ್ನಡಸಾಹಿತ್ಯ ಚರಿತ್ರೆಯಲ್ಲಿ ಪ್ರಧಾನವಾದ ಸ್ಥಾನವನ್ನು ಪಡೆದುಕೊಂಡಿದ್ದಾರೆ. ದಾಸರ ಹಾಡುಗಳು ದಾಸಸಾಹಿತ್ಯವೆಂದೇ ಕರೆಯಲ್ಪಡುವಷ್ಟರ ಮಟ್ಟಿಗೆ ಮೌಲ್ಯದಲ್ಲೂ, ಸಂಖ್ಯೆಯಲ್ಲೂ ಅತುಲವಾಗಿವೆ. ಅದೆಷ್ಟೋ ಜನ ದಾಸರು ಮನೆಮಠಗಳನ್ನು ತ್ಯಜಿಸಿ ವೈರಾಗ್ಯಪರರಾಗಿ ಭಗವಂತನ ನಾಮಸಂಕೀರ್ತನೆ ಮಾಡುತ್ತಾ ತಮ್ಮ ಜೀವನವನ್ನು ಸಫಲವಾಗಿರಿಸಿಕೊಂಡಿದ್ದು ರೋಚಕವಾದ ವಿಷಯವಾಗಿದೆ. ಕನ್ನಡ ಸಾಹಿತ್ಯ ಚರಿತ್ರೆಯ ಇತರ ಮಜಲುಗಳಂತೆಯೇ ದಾಸಸಾಹಿತ್ಯವೂ ವರ್ಣರಂಜಿತವಾದ ಮಜಲುಗಳನ್ನು ಹೊಂದಿ ಅನೇಕ ವಿವರಗಳನ್ನು ಬಿಟ್ಟುಕೊಡುವಂತಹುದಾಗಿದೆ. ಭಗವಂತನನ್ನು ಸ್ತೋತ್ರ ಮಾಡುತ್ತಾ ಅವರ ಜೊತೆಗೆ ಧರ್ಮ ಪ್ರಚಾರವನ್ನು ಮಾಡುತ್ತಾ ಜನಗಳಲ್ಲಿ ದೇವರ ಬಗೆಗೆ ಶ್ರದ್ಧೆ – ಭಕ್ತಿಗಳುಂಟಾಗುವಂತೆ ಮಾಡಲು ಹೆಣಗಿದ ಈ ಮಹನೀಯರ ಸ್ಮರಣೆ ಪುಣ್ಯದಾಯಕವಾದುದಾಗಿದೆ. ಭಾಗವತಧರ್ಮವೇ ಇವರಿಗೆ ಮೂಲಧರ್ಮವಾಗಿದ್ದಿತೆನ್ನಬಹುದು ಹಾಗೆ ನೋಡಿದರೆ ಭಾಗವತಧರ್ಮ ಬಹಳಷ್ಟು ಹಳೆಯದೇ. ಭಾಗವತಧರ್ಮಕ್ಕೆ ಬೆನ್ನೆಲುಬಾಗಿ ನಿಂತಿರುವುದು ಭಕ್ತಿ. "ಭಾಗವತ ಧರ್ಮದಲ್ಲಿ ಭಕ್ತಿಗೆ ಹೆಚ್ಚಿನ ಪ್ರಾಶಸ್ತ್ಯ. ಅಪೌರುಷೇಯ ಅನಾದಿ ಎಂದು ಹೇಳುವ ವೇದಗಳಲ್ಲಿಯೇ ಭಕ್ತಿಯ ಉಲ್ಲೇಖವಿದೆ." ಭಾಗವತ ಧರ್ಮದಲ್ಲಿ ವ್ಯಕ್ತಿಯೊಬ್ಬ ಶ್ರದ್ಧೆ, ವಿಶ್ವಾಸಗಳನ್ನಿಟ್ಟನೆಂದರೆ ಆಯಿತು – ಅವನು ತನ್ನದಾಗಿರುವ ಎಲ್ಲವನ್ನೂ ಭಾಗವತಧರ್ಮದ ಮೂಲ ಪ್ರೇರಕಶಕ್ತಿಯಾಗಿರುವ ಪರಮಾತ್ಮನಿಗೆ ಅರ್ಪಿಸಲು ಸಿದ್ಧನಾಗಿರುತ್ತಾನೆ. ಜ್ಞಾನಕ್ಕಿಂತಲೂ ಶ್ರೇಷ್ಠವೆಂದು ಪರಿಗಣಿಸಲ್ಪಡುವ ಭಕ್ತಿಗೆ ಭಾಗವತಧರ್ಮದಲ್ಲಿ ಪ್ರಾಶಸ್ತ್ಯ ಸಿಕ್ಕಿದ್ದು ಮೆಚ್ಚತಕ್ಕದ್ದಾಗಿದೆ. ಈ ರೀತಿಯ ಭಗವತ್‌ಶಕ್ತಿಯಲ್ಲಿ ಸಾಧಕರು ತಮ್ಮ ಇಚ್ಛೆಗನುಸಾರವಾಗಿ ತಮ್ಮ ಆರಾಧ್ಯದೈವಗಳನ್ನು ಸ್ತುತಿಸುವುದುಂಟು. ಹೀಗೆ ಭಕ್ತಿ ಪರಂಪರೆ ಭಾರತದೇಶದಲ್ಲಿ ಏಕಮುಖವಾಗಿಲ್ಲ, ನಾನಾ ಕವಲುಗಳಲ್ಲಿ ಹರಡಿಕೊಂಡಿದೆ. ಆ ಭಕ್ತಿ ಪರಂಪರೆ ಮೂಡಿಬಂದ ವಿಷಯವಾದರೂ ರೋಮಾಂಚನಕಾರಿಯಾದುದೇ ಎನ್ನಬಹುದು. ಕೃಷ್ಣಭಕ್ತಿ, ರಾಮಭಕ್ತಿ, ಶೈವಭಕ್ತಿ ಹೀಗೆ ಭಕ್ತಿ ಪರಂಪರೆಯಲ್ಲಿಯೇ ನಾನಾ ಕವಲುಗಳಿವೆ. ಉತ್ತರಭಾರತದಲ್ಲಿ ಹೆಚ್ಚು ಪ್ರಚಲಿತವಾಗಿದ್ದ ಕೃಷ್ಣಭಕ್ತಿ ಪರಂಪರೆಯು ಕರ್ನಾಟಕದ ದಾಸರಿಗೂ ಮೆಚ್ಚಿನದಾಗಿದ್ದಿತು. ಕೃಷ್ಣೋಪಾಸನೆಯಲ್ಲಿ ಈ ದಾಸರು ಲೀನರಾಗಿ ಹೋಗಿದ್ದರು. ಸಂಸಾರದ ಜಡತತ್ತ್ವಗಳಲ್ಲಿ ನಿರಾಸಕ್ತರಾಗಿ, ಪರಜ್ಞಾನ ಪಡೆಯುವಲ್ಲಿ ಚೈತನ್ಯಶೀಲರಾಗಿದ್ದರು. ಭಕ್ತಿ ಪರಂಪರೆಯ ವಿಸ್ತೃತ ವಿವೇಚನೆಗಿಂತಲೂ ಪ್ರಸ್ತುತದಲ್ಲಿ ಕರ್ನಾಟಕದಲ್ಲಿ ದಾಸರು ಕೃಷ್ಣೋಪಾಸನೆಯನ್ನು ಮಾಡಿದುದರ ವಿವರಣೆ ಮುಖ್ಯವಾಗುತ್ತದೆ.

ಹರಿಭಕ್ತಿಯ ಪ್ರವಾಹ ಕರ್ನಾಟಕದಲ್ಲಿ ಆಚಾರ್ಯಪುರುಷರಾದ ಶ್ರೀ ಮನ್ಮಧ್ವಾಚಾರ್ಯರಿಂದಲೇ ಹರಿಯಲಾರಂಭಿಸಿತೆನ್ನಬಹುದು. ಮಧ್ವಾಚಾರ್ಯರ ದ್ವೈತಸಿದ್ಧಾಂತ ತತ್ತ್ವಗಳೊಂದಿಗೆ ಎಲ್ಲೋ ಅಡಗಿಹೋಗಿದ್ದ ಭಾಗವತ ಪಂಥದ ಭಕ್ತಿ ಪ್ರಚಾರವೂ ಬೆಳಕಿಗೆ ಬಂದಿತು. ಮಧ್ಯಗೇಹಭಟ್ಟರನ್ನು ತಂದೆಯಾಗಿ ಪಡೆದ ಮಧ್ವಾಚಾರ್ಯರು ಅನೇಕ ಪವಾಡಗಳನ್ನು ಮೆರೆದವರಾಗಿದ್ದರು. ಅಚ್ಯುತ ಪ್ರೇಕ್ಷರೆಂಬುವರಿಂದ ಸನ್ಯಾಸ ದೀಕ್ಷೆಯನ್ನು ಪಡೆದ ಶ್ರೀ ಮಧ್ವಾಚಾರ್ಯರು ಹರಿಸರ್ವೋತ್ತಮತ್ವವನ್ನು ಉಪದೇಶಿಸಿದ ಮಹಾನುಭಾವರಾಗಿದ್ದರು. ಮಧ್ವಾಚಾರ್ಯರಿಗ ಅನೇಕ ಶಿಷ್ಯರಿದ್ದರು. ನರಹರಿತೀರ್ಥ, ಅಕ್ಷೋಭ್ಯತೀರ್ಥ, ಪದ್ಮನಾಭತೀರ್ಥ ಮುಂತಾದ ಶಿಷ್ಯರು ಅವರಲ್ಲಿ ಪ್ರಮುಖರಾಗಿದ್ದರು. ಉಡುಪಿ ಕ್ಷೇತ್ರದಲ್ಲಿ ಅಷ್ಟ ಮಠಗಳನ್ನು ಸ್ಥಾಪಿಸಿದ ಕೀರ್ತಿಯೂ ಮಧ್ವರಿಗೇ ಸೇರಬೇಕು. ಅವರ 'ದ್ವಾದಶ ಸ್ತೋತ್ರ'ದ ಕೆಲವು ಪದ್ಯಗಳು ದಾಸಕೂಟದ ವಿಷಯವನ್ನು ಪ್ರತಿಪಾದಿಸುವಲ್ಲಿ ನೆರವು ನೀಡುತ್ತದೆ. ತುಳುಭಾಷೆಯಲ್ಲಿಯೂ ಮಧ್ವರು ಪದಗಳನ್ನು ರಚಿಸಿದ್ದರಂತೆ.

ದಾಸಸಾಹಿತ್ಯದಲ್ಲಿ ಪ್ರಮುಖರಾದವರೂ ಪ್ರಾತಃಸ್ಮರಣೀಯರೂ ಆದವರೇ ಶ್ರೀಪಾದರಾಯರು.

## ಶ್ರೀಪಾದರಾಯರು :-

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅದರಲ್ಲಿಯೂ ದಾಸಸಾಹಿತ್ಯವನ್ನು ನಿರ್ಮಿಸಿದ ಸಂತರ ಪರಂಪರೆಯಲ್ಲಿ ಶ್ರೀಪಾದರಾಯರ ಹೆಸರು ಅಚ್ಚಳಿಯದೇ ನಿಲ್ಲುವಂತಹುದು. ಅಬ್ಬೂರು ಗ್ರಾಮ ಶ್ರೀಪಾದರಾಯರ ಜನ್ಮಸ್ಥಳವಾಗಿದ್ದಿತು. ಅವರ ತಂದೆ–ತಾಯಿಗಳು ಬಡವರಾಗಿದ್ದರಂತೆ! ಅವರ ಹೆಸರು ಶೇಷಗಿರಿಯಪ್ಪ ಮತ್ತು ಗಿರಿಯಮ್ಮ. ಅವರು ವೈಷ್ಣವ ಬ್ರಾಹ್ಮಣರು. ಹಾಗೆ ನೋಡಿದರೆ ಶ್ರೀಪಾದರಾಯರ ನಿಜವಾದ ಹೆಸರು ಲಕ್ಷ್ಮೀನಾರಾಯಣನೆಂಬುದು. ಲಕ್ಷ್ಮೀನಾರಾಯಣ 'ಸ್ವರ್ಣವರ್ಣತೀರ್ಥ' ಎಂಬುವರಲ್ಲಿಗೆ ಬಂದು ದೀಕ್ಷೆಯನ್ನು ತೆಗೆದುಕೊಂಡಿರಬಹುದೆಂಬ ಅಭಿಪ್ರಾಯವಿದೆ. ರಘುನಾಥತೀರ್ಥರು ಲಕ್ಷ್ಮೀನಾರಾಯಣನಿಗೆ ಶ್ರೀಪಾದರಾಜನೆಂಬ ಹೆಸರುಕೊಟ್ಟ

ಮಹಾನುಭಾವರು. ತಮ್ಮ ಪ್ರಾರಂಭದ ಗುರುಗಳಾದ ಸ್ವರ್ಣವರ್ಣತೀರ್ಥರಿಂದ ಪೀಠದಲ್ಲಿ ಪಟ್ಟಾಭಿಷಿಕ್ತರಾಗುವ ಭಾಗ್ಯ ಶ್ರೀಪಾದರಾಜರಿಗೊದಗಿತು. ಶ್ರೀನಿಧಿ ತೀರ್ಥರ 'ಶ್ರೀಪಾದರಾಜಾಷ್ಟಕ' ಎಂಬುವುದರಲ್ಲಿ ಶ್ರೀಪಾದರಾಜರ ಬಗೆಗಿನ ಕೆಲವೊಂದು ವಿಷಯಗಳು ತಿಳಿದುಬರುತ್ತವೆ. ಶ್ರೀಪಾದರಾಯರು ಕೇವಲ ಯೋಗಿಗಳಾಗಿದ್ದುದು ಮಾತ್ರವಲ್ಲ – ಅನೇಕ ಪವಾಡಗಳನ್ನು ಮೆರೆದವರಾಗಿದ್ದರು. ಅವುಗಳಲ್ಲಿ ಮುಖ್ಯವಾದುದೆಂದರೆ ದುಷ್ಟಜನರು ಮಾಂಸಾಹಾರವನ್ನು ಶ್ರೀಪಾದರಾಯರಿಗೆ ಆಹಾರವಾಗಿ ಒದಗಿಸಿದಾಗ ಸ್ವಲ್ಪವೂ ವಿಚಲಿತರಾಗದೆ ಆ ಮಾಂಸಾಹಾರವನ್ನು ಫಲಾಹಾರವನ್ನಾಗಿ ಮಾಡಿದ ಶ್ರೀಪಾದರಾಯರ ಹಿರಿಮೆ ಕಾಲಕ್ಕೂ ನಿಲ್ಲುವಂತಹುದು. ವಿಜಯನಗರದ ದೊರೆಯಾದ ವೀರನರಸಿಂಹನು ಶ್ರೀಪಾದರಾಯರನ್ನು ಚಿನ್ನದ ಹೂಗಳಿಂದ ಸನ್ಮಾನಿಸಿದನೆಂದು ತಿಳಿದುಬಂದಿದೆ.

ಶ್ರೀಪಾದರಾಯರಿದ್ದ ಮುಳುಬಾಗಿಲಿನ ಮಠಕ್ಕೆ ಶ್ರೀಪಾದರಾಜಮಠವೆಂಬ ಹೆಸರೇ ಬಂದಿತು. ಸಂಸ್ಕೃತ ಭಾಷೆಯಲ್ಲಿ ಆಳವಾದ ಜ್ಞಾನವನ್ನುಳ್ಳ ಶ್ರೀಪಾದರಾಯರು ಸಂಸ್ಕೃತದಲ್ಲಿ ವಾಗ್ವಜ್ರವನ್ನು ರಚಿಸಿದರು. ವಾಗ್ವಜ್ರಕ್ಕಿಂತಲೂ ಶ್ರೀಪಾದರಾಯರ ಭಗವನ್ನಾಮ ಸಂಕೀರ್ತನೆಯನ್ನು ಮಾಡುವ ಭಕ್ತಿಮಯವಾದ ಗೀತೆಗಳು ಹೆಚ್ಚು ಪ್ರಸಿದ್ಧವಾಗಿವೆ. ಆ ಗೀತೆಗಳಲ್ಲಿ ಉನ್ನತವಾದ ಮೌಲ್ಯಗಳಿವೆ. ಭಕ್ತಿಪರ ಗೀತೆಗಳಲ್ಲಿ ಶ್ರೀಪಾದರಾಯರ ಭಕ್ತಿ ತನ್ಮಯತೆ ಸೊಗಸಾಗಿ ನಿರೂಪಿತವಾಗಿರುವುದನ್ನು ಗುರುತಿಸಬಹುದು.

"...ಎಂದೆಂದು ಸಿರಿಯರಸನೆಂದು ಶ್ರುತಿ ಸಾರುತಿವೆ ಒಂದುಮೀಗೇನು ಸಿರಿಯೋ ಕೃಷ್ಣ–" ಎಂಬ ಗೀತೆಯಲ್ಲಿ ಶ್ರೀಪಾದರಾಯರ ಸಮಸ್ತ ಅಂತಃಕರಣವೇ ಕರಗಿ ದ್ರವವಾಗಿ ಹೊರಬಂದಂತೆ ಅನ್ನಿಸುತ್ತದೆ. "ಅನಂತ ಕಾಲದಲ್ಲಿ ನಿನ್ನ ನಾನರಿಯದೆ ಭವಗಳಲಿ ಬಂದೆನೋ ಅನಂತ ಕಾಲದಲ್ಲಿ ನಿನ್ನವ ನೆನಸದೆ ಮರುಳುಮನಾದೆನೊ" ಎಂಬ ಗೀತೆಯಲ್ಲಿಯೂ ಸಹ ಜೀವವೊಂದು ಭವಬಂಧನದ ಮಾಯಾ ಪ್ರಪಂಚದಿಂದ ಸುಲಭವಾಗಿ ಬಿಡಿಸಿಕೊಳ್ಳಲಾಗದೆ ಹೆಣಗಾಡುತ್ತಿರುವ ಸುಂದರ ಚಿತ್ರಣವಿರುವುದನ್ನು ಗುರುತಿಸಬಹುದು. ಕಂಗಳಿದ್ಯಾತಕೊ ಕಾವೇರಿ ರಂಗನ ನೋಡದ–ಎಂದು ಹಾಡುವ ಶ್ರೀಪಾದರಾಯರು ಬಾಲಕೃಷ್ಣ – ಯಶೋದೆಯರ ಚಿತ್ರಣದಲ್ಲಿ ವಾತ್ಸಲ್ಯ ಭಾವವನ್ನು ಪ್ರದರ್ಶಿಸುವಲ್ಲಿ ಸಫಲರಾಗಿದ್ದಾರೆ. ಹಿಂದೀ ಸಾಹಿತ್ಯದಲ್ಲಿ ಖ್ಯಾತನಾಮರಾದ ಸೂರದಾಸರು ಬಾಲಕೃಷ್ಣನ ಲೀಲೆಗಳನ್ನು ಹೃದಯಂಗಮವಾಗಿ ಚಿತ್ರಿಸಿರುವಂತೆಯೇ ಶ್ರೀಪಾದರಾಯರ ಕೃಷ್ಣಲೀಲೆಗಳ ವರ್ಣನೆಯೂ ಮೋಹಕವಾದುದಾಗಿದೆ ಎನ್ನಬಹುದು. 'ವೇಣುಗೀತ, ಶೃಂಗಾರ ಪಾರಿಜಾತ, ಭ್ರಮರಗೀತ'ಗಳಲ್ಲಿ ಬರುವ ಕೃಷ್ಣ–ಗೋಪಿಕಾಸ್ತ್ರೀಯರ ಕಥಾನಕಗಳನ್ನೂ ತೆಗೆದು ಹಾಕುವಂತಿಲ್ಲ. ಶ್ರೀಪಾದರಾಯರ ಕೃತಿಗಳಲ್ಲಿ ಗೋಚರಿಸುವ ಕೃಷ್ಣನ ಪಾತ್ರವಂತೂ ಭವಬಂಧನದಿಂದ ಮುಕ್ತಗೊಳಿಸುವಂತಹದು, ಮೋಕ್ಷವನ್ನು ನೀಡುವಂತಹದಾಗಿದೆ. ಶ್ರೀಪಾದರಾಯರ ಕೀರ್ತನೆಗಳ ಸರಸ, ಮಾಧುರ್ಯಭಾವದ, ಶೈಲಿ, ಹೃದಯರಂಜಕಗುಣ, ಭಕ್ತಿಯ ಪರಮಾವಧಿಯ ಚಿತ್ರಣ–ಇವುಗಳಿಂದ ಅವರ ಕೀರ್ತನೆಗಳು ಇಂದಿಗೂ ಜನಪ್ರಿಯತೆಯನ್ನು ಪಡೆದಿವೆ.

ಶ್ರೀಪಾದರಾಯರ ಕೃತಿಗಳನ್ನು ಕುರಿತಂತೆ "ಶ್ರೀಪಾದರಾಯರ ಕನ್ನಡ ಕೃತಿಗಳಲ್ಲಿ ಪದಲಾಲಿತ್ಯ, ಅಲಂಕಾರ ಪ್ರೌಢಿಮೆ, ಶೃಂಗಾರ–ಶಾಂತಿ–ಭಕ್ತಿ ರಸಗಳ ನಿರೂಪಣೆ ಇವು ಓದುಗರ ಚಿತ್ತವನ್ನೂ, ಹೃದಯವನ್ನೂ ಆಕರ್ಷಿಸುವುವು. ಶ್ರೀ ಭಾಗವತದ ಕೃಷ್ಣ ಕತೆಯನ್ನು ಚಿಕ್ಕ ಚಿಕ್ಕ ಪದಗಳಲ್ಲಿ ಬಹು ರಸವತ್ತಾಗಿ ಹಾಡಿದ್ದಾರೆ"-ಎಂಬ ವಿದ್ವಾಂಸರೊಬ್ಬರ ಉಕ್ತಿ ಅವರ ಕೃತಿಗಳಿಗೆ ಚೆನ್ನಾಗಿ ಅನ್ವಯಿಸುತ್ತದೆ. ಶ್ರೀಪಾದರಾಯರ ಭ್ರಮರಗೀತೆಯೂ ಸ್ವಾರಸ್ಯಕರವಾಗಿದೆ. ಭಾಗವತದ ಮೂಲ ಭ್ರಮರಗೀತೆಯ ಕತೆಯೇ ಇಲ್ಲಿಯೂ ಬಂದಿದ್ದರೂ ಸಹ ಅನೇಕ ಸ್ವತಂತ್ರವಾದ ಕಲ್ಪನೆಗಳಿಂದ ಸುಂದರವಾಗಿ ಮೂಡಿಬಂದಿರುವ ಇದು ರಸವತ್ತಾದ ಕೃತಿಯಾಗಿದೆಯೆನ್ನುವುದರಲ್ಲಿ ಸಂಶಯವಿಲ್ಲ.

ಶ್ರೀಪಾದರಾಯರು ದಾಸಸಾಹಿತ್ಯದ ಪ್ರಾರಂಭಿಕ ನಿರ್ಮಾಪಕರೂ ಆದುದರಿಂದ ಅವರಿಗೆ ಸಾಹಿತ್ಯಚರಿತ್ರೆಯಲ್ಲಿ, ಕರ್ನಾಟಕದ ಧಾರ್ಮಿಕ ಇತಿಹಾಸದಲ್ಲಿ ಪ್ರಮುಖವಾದ ಸ್ಥಾನ ದೊರೆತಿದೆಯೆಂದು ನಿರಾಳವಾಗಿ ಹೇಳಬಹುದು.

××

# ಶ್ರೀ ವೆಂಕಟೇಶ್ವರ ಭಕ್ತಿ ಸಾರ

ಶ್ರೀಶ ಹೇ ಜಗದೀಶ, ನಿನ್ನನು
ಪಾಲಿಸುವಳಾ ಸಿರಿಯು ಸರ್ವದ
ದಾಸರೆಂದೆನಿಸಿಹರು ಸುರರುಗಳಾವ ಕಾಲದಲಿ ||
ಶೇಷಗರುಡೇಂದ್ರಾದಿಗಳು ಲವ
ಲೇಶವರಿಯರು ನಿನ್ನ ಮಹಿಮೆ ಸ
ದಾಶಿವಾರ್ಚಿತ ಚರಣ ವೇಂಕಟ ರಕ್ಷಿಸನವರತ || ೧ ||

ದೇವದೇವನೆ, ತ್ರಿಭುವನಂಗಳ
ಕಾವ ದೇವನೆ, ಪಾಪ ಮರ್ದನ
ಭಾವ-ಮೈದುನಗೊಲಿದು ಬಂಡಿಯ ಬೋವತನಗೈಯ್ದೆ ||
ಶ್ರೀ ವಿರಿಂಚಾದ್ಯನಿಮಿಷರುಗಳ
ಸೇವೆ ಕೈಕೊಳುತಿರುವ ದೇವ. ಕೃ
ಪಾವಲೋಕನದಿಂದ ವೇಂಕಟ ರಕ್ಷಿಸನವರತ || ೨ ||

ಅಜನ ಪಿತ, ಜಾಹ್ನವಿಯ ಜನಕನೆ
ವಿಜಯ ಸಾರಥಿ, ಕುಜನ ಮರ್ದನ
ಸುಜನ ರಕ್ಷಕ, ಗಜ, ಅಜಾಮಿಳ ಕುಬ್ಜೆಗೊಲಿದವನೆ ||
ಭಜಿಸುವರ ಭವ ರುಜಿನಭಂಜನ
ತ್ರಿಜಗ ಪೂಜಿತಜಸ್ರ ನಿನ್ನನು
ಭಜಿಪೆ ನಿಜಭಕ್ತಿಯಲಿ ವೇಂಕಟ ರಕ್ಷಿಸನವರತ || ೩ ||

ಏನನರಿಯ ಧ್ರುವಕುಮಾರನು
ಕಾನನದಿ ತಾ ಕುಳಿತು ಭಜಿಸಲು
ನೀನೊಲಿದು ಶಾಶ್ವತದ ಸಾಮ್ರಾಜ್ಯವನೆ ಪಾಲಿಸಿದೆ ||
ದಾನಿ ನಿನ್ನ ಸಮಾನ ದಾನಿಗ
ಳೀ ನಳಿನಜಾಂಡದೊಳು ಕಾಣೆ, ಪು
ರಾಣ ಪುರುಷೋತ್ತಮನೆ, ವೇಂಕಟ ರಕ್ಷಿಸನವರತ || ೪ ||

ಎತ್ತ ಪೋದರು ಮೃತ್ಯು ದೇವತೆ
ನೃತ್ಯವಾಡುತಲೆನ್ನ ಹತ್ತಿರ
ಸುತ್ತಿ-ಸುಳಿವಳು ಗೊತ್ತು ಗುರಿಯಿಲ್ಲದಲೆ ಪ್ರತಿನಿತ್ಯ ||
ಸತ್ತು ಪುಟ್ಟುವ, ಪುಟ್ಟಿ ಸಾಯುವ
ಕುತ್ತಿನಿಂದಲಿ ಬಿಡಿಸು ಬೇಡುವೆ
ಸತ್ಯಧ್ಯಾನರಿಗೊಲಿದ ವೇಂಕಟ ರಕ್ಷಿಸನವರತ || ೫ ||

ದೇವ ದೇವನೆ ಮೃದುಸ್ವಭಾವದ
ದೇವ, ವಿಶ್ವಂಭರನೆ. ಎಲ್ಲಾ
ಠಾವಿನಲಿ ಆವಾಸನೆನ್ನಿಸಿ, ಸರ್ವ ಜೀವಿಗಳ ||
ಕಾವ ದೇವನೆ, ಪಾಪ ಮರ್ದನ
ಶ್ರೀ ಮಧೂರಮಣಾವಗಲು ನಾ
ಸೇವಿಸುವೆ ಭಕ್ತಿಯಲಿ ವೇಂಕಟ ರಕ್ಷಿಸನವರತ || ೬ ||

ಏಕಮೇವಾದ್ವಿತಿಯ ನಿನ್ನ ತ
ದೇಕ ಚಿತ್ತದಿ ಧ್ಯಾನಿಸದಲವಿ
ವೇಕಿಯೆಂದೆನಿಸಿದನು ಕುಜನರ ಕೂಡಿ ಕುಲಗೆಟ್ಟೆ ||
ಮಾ ಕಳತ್ರನೆ ಸಾಕದೆನ್ನನು
ಲೋಕದೊಳಗಿನ್ನೇಕೆ ನೂಕಿದೆ
ಹೇ ಕೃಪಾನಿಧಿ ನಮಿಪೆ ವೇಂಕಟ ರಕ್ಷಿಸನವರತ || ೭ ||

ಗಗನಚರ ವಾಹನನೆ, ಭಕ್ತಾ
ದಿಗಳ ಗೃಹಗೃಹಗಳಲಿ ತಿರುಗುವ
ಸುಗುಣನಿಧಿ, ಹಗಲಿರುಳು ನಿನ್ನನೆ ಪೊಗಳಿ ಹಿಗ್ಗುವೆನು ||
ನಿಗಮಗೋಚರ ತ್ರಿಜಗ ಪೂಜಿತ
ನಗುನಗುತ ಜಠರದಲಿ ಜನನಿಗೆ
ಜಗವ ತೋರಿದ ಮಗುವೆ ವೇಂಕಟ ರಕ್ಷಿಸನವರತ || ೮

ಗರುಡ ಮಾರುತಿ ಉರಗರಂದದಿ
ನಿರುತ ಸದ್ಭಕ್ತಿಯಲಿ ಸೇವಿಸ
ಲರಿಯೆ, ಶಬರಿಯ ತೆರದಿ ಸವಿ ಫಲಕೊಡಲು ನಾನರಿಯೆ ||
ಕರೆಪೆಶೋದಾದೇವಿಯಂದದಿ
ತುರುವಿನಾ ನೊರೆ ಕ್ಷೀರವೀಯುವ
ನಿರುಪಯುಕ್ತನಿಗೊಲಿದು ವೇಂಕಟ ರಕ್ಷಿಸನವರತ || ೯ ||

ಏನು ಧನ್ಯರೊ ನಿನ್ನ ಭಕ್ತರು
ಸಾನು ಕಂಪದಿ ಪೊರೆವ ನಿನ್ನ ಸ
ಮಾನ ದೇವರ ಕಾಣೆ ವೇದ ಪುರಾಣ ಶಾಸ್ತ್ರದಲಿ ||
ಕಾನನಾಂತರದೊಳಗೆ ನಿನ್ನನೆ
ಧ್ಯಾನಿಸುತ ಕುಳಿತಾ ಸುನೀತಿಯ
ಸೂನು ಧ್ರುವಗೊಲಿದವನೆ ವೇಂಕಟ ರಕ್ಷಿಸನವರತ || ೧೦ ||

ಶ್ರೀ ಕೆ. ರಾಮಾಚಾರ್ಯ

# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಅರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನು ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗದಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಅರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
(2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ
ಬರೆಯಿರಿ:

**ಕಾರ್ಯನಿರ್ವಹಣಾಧಿಕಾರಿ**
**ತಿ. ತಿ. ದೇ. ತಿರುಪತಿ.**

# ಕೈಂಕರ್ಯದ ಹಿರಿಮೆ

ಮಾನವಸೇವೆಯೇ ಮಾಧವಸೇವೆ ಎಂದು, ಅಥವಾ ಜನ ಸೇವೆಯೇ ಜನಾರ್ದನ ಸೇವೆ ಯೆಂದು ಹೇಳುತ್ತಾರೆ. ಅನಾದಿ ಕಾಲದಿಂದಲೂ ವೇದವ್ಯಾಸಾದಿ ಮುನಿಗಳೂ, ಮಹಾತ್ಮರೂ, ಲೋಕಕಲ್ಯಾಣಕ್ಕಾಗಿ, ದೀನ ದಲಿತರ ಜೀವನೋದ್ಧಾರಕ್ಕಾಗಿ ಕೃಪೆಯಿಂದ ಇತಿಹಾಸ ಪುರಾಣಾದಿಗಳನ್ನು ದಯಪಾಲಿಸಿ ಧರ್ಮ ಮಾರ್ಗಗಳನ್ನು ಅನುಸರಿಸಿ ಆಚರಿಸಿ, ತೋರಿಸಿಕೊಟ್ಟಿದ್ದಾರೆ, ತಮ್ಮ ಜೀವನಕ್ಕಾಗಿ ಮಾಡುವ ಸೇವೆ ಸಾಧಾರಣವಾದದ್ದು. ನಿರಂತರವಾಗಿ ತಮ್ಮ ಜೀವನವೆಲ್ಲಾ ಪರಮಾತ್ಮನ ಗುಣಗಾನದಲ್ಲಿ ಭಕ್ತಿಪ್ರಪೂರಿತವಾಗಿ ಮಾಡುವ ಸೇವೆಯೇ ಪರಮಾತ್ಮನ ಸೇವೆ ಅಥವಾ "ಕೈಂಕರ್ಯ"ಎಂದು ಹೇಳುತ್ತಾರೆ. ಈ ಪರಮಾತ್ಮನ ಕೈಂಕರ್ಯವನ್ನು ನೇರವಾಗಿ ಮಾಡುವುದೂ ಉಂಟು. ಇನ್ನೊಂದು ವಿಧದಲ್ಲಿ, ತಮ್ಮ ಜೀವನವನ್ನು ಜನರ ಸೇವೆಯಲ್ಲಿ ಕಳೆದು ಜನಾರ್ದನ ಸೇವೆಯೆಂದು ಮಾಡುವುದೂ ಉಂಟು.

ಶ್ರೀಮದ್ವಾಲ್ಮೀಕಿ ರಾಮಾಯಣದಲ್ಲಿ ಅನೇಕ ವಿಧವಾಗಿ ಭಗವಂತನ ಕೈಂಕರ್ಯವನ್ನು ಮಾಡಿದ್ದಾರೆ, ಅದನ್ನು ಈಗ ವಿಶದವಾಗಿ ನೋಡೋಣ.

"ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ" ಎಂಬ ಗೀತಾ ವಾಕ್ಯಾರ್ಥ ಸ್ವರೂಪವಾಗಿ ಯಾವುದೇ ಕರ್ಮ ಫಲದ ಅಪೇಕ್ಷೆಯಿಲ್ಲದಂತೆ, ಹುಟ್ಟಿನಿಂದ – ಅವತಾರ ಸಮಾಪ್ತಿಯವರೆಗೆ ಶ್ರೀರಾಮನ ಸನ್ನಿಧಿಯಲ್ಲಿ ಕೈಂಕರ್ಯಪರನಾಗಿ ಆ ಭಗವಂತನ ಕೈಂಕರ್ಯವೇ ಪರಮಾರ್ಥವೆಂದು ನಿರೂಪಿಸಿದ್ದಾನೆ, ಅನುಜ ಲಕ್ಷ್ಮಣ.

ಲಕ್ಷ್ಮಣೋ ಲಕ್ಷ್ಮಿಸಂಪನ್ನಃ
ಬಹಿಃಪ್ರಾಣ ಇವಾಪರಃ
ನಚ ತೇನ ವಿನಾ ನಿದ್ರಾಂ
ಲಭತೇ ಪುರುಷೋತ್ತಮಃ
ಮೃಷ್ಟಮನ್ನ ಮುಪಾನೀತಂ
ಅಶ್ನಾತಿ ನಹಿ ತಂ ವಿನಾ
ಯದಾಹಿ ಹಯಮಾರೂಢಃ
ಮೃಗಯಾಂ ಯಾತಿ ರಾಘವಃ
ತದೈನಂ ಪೃಷ್ಠತೋಭ್ಯೇತಿ
ಸಧನುಃ ಪರಿಪಾಲಯನ್

ಎಂದು ಬಾಲಕಾಂಡದ 18 ನೇ ಸರ್ಗದ 29, 30, 31 ನೇ ಶ್ಲೋಕಗಳಲ್ಲಿ ವಿವರಿಸಿರುತ್ತಾರೆ. ಲಕ್ಷ್ಮಿ ಸಂಪನ್ನನಾದ ಲಕ್ಷ್ಮಣನು ರಾಮನಿಗೆ ಮತ್ತೊಂದು ಪ್ರಾಣವಾಗಿದ್ದನು. ಅವನನ್ನು ಬಿಟ್ಟು ರಾಮನು ನಿದ್ರಿಸುತ್ತಿರಲಿಲ್ಲ. ಮೃಷ್ಟಾನ್ನ ಭೋಜನವನ್ನೂ ಮಾಡುತ್ತಿರಲಿಲ್ಲ. ಬೇಟೆಗೆ ಅಶ್ವಾರೂಢನಾಗಿ ಹೋಗುತ್ತಿರುವಾಗಲೂ ಲಕ್ಷ್ಮಣನು ಅಗ್ರಜನನ್ನು ಹಿಂಬಾಲಿಸುತ್ತಿದ್ದನು. ಅಯೋಧ್ಯಾಕಾಂಡದಲ್ಲಿ ಕೈಕೇಯಿಯಿಂದ ಯುವರಾಜ್ಯ ಪಟ್ಟಾಭಿಷೇಕಕ್ಕೆ ವಿಘ್ನ ಉಂಟಾದಾಗ ಸ್ಥಿತ ಶ್ರೇಷ್ಠನಿಂದ ಶ್ರೀರಾಮನು ಪಿತೃವಾಕ್ಯ ಪರಿಪಾಲನೆಗಾಗಿ ವನವಾಸಕ್ಕೆ ಹೋಗುವ ಸಮಯದಲ್ಲಿ ಲಕ್ಷ್ಮಣನು,–

ಅಹಂ ಸರ್ವಂ ಕರಿಷ್ಯಾಮಿ
ಜಾಗ್ರತಃ ಸ್ವಪತಶ್ಚತೇ
(ಅಯೋಧ್ಯಾ ಕಾಂಡ – 31 ನೇ ಸರ್ಗ – 27 ನೇ ಶ್ಲೋಕ)

"ನಾನು ಹಗಲೂ ರಾತ್ರಿ ನಿಮ್ಮ ಸೇವೆಯನ್ನು ಮಾಡುತ್ತೇನೆ"

ಎಂದು ಹೇಳಿ ಶ್ರೀರಾಮ ಸೇವಾದುರಂಧರನಾಗಿ ಹದಿನಾಲ್ಕು ವರ್ಷ ರಾಮನ ಜೊತೆಯಲ್ಲಿ ಕಳೆಯುತ್ತಾನೆ ಶ್ರೀರಾಮನ ಕೈಂಕರ್ಯವನ್ನು ಬಿಟ್ಟು ಬೇರಾವುದನ್ನೂ ಅಪೇಕ್ಷಿಸಲಿಲ್ಲ. ಆ ಭಗವಂತನ ಕೈಂಕರ್ಯಕ್ಕಾಗಿ ಎಲ್ಲವನ್ನೂ ತ್ಯಜಿಸಿದನು.

"ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ" ಎಂಬ ಗೀತಾ ವಾಕ್ಯಾರ್ಥ ಈ ಮೂಲಕ ವಿಶದವಾಗುತ್ತದೆ. ಸರ್ವಧರ್ಮಾನ್ ಪರಿತ್ಯಜ್ಯ ಎಂದರೆ ತನ್ನ ಇತರೇ ಧರ್ಮಗಳು ಅಂದರೆ ತನ್ನ ತಾಯಿ, ಹೆಂಡತಿ ಮತ್ತು ಬಂಧು ಮಿತ್ರರಲ್ಲಿ ಇರುವ ಧರ್ಮವನ್ನು ಸಂಪೂರ್ಣವಾಗಿ ತ್ಯಜಿಸಿ ಆ ಪರಮಾತ್ಮನೇ ಗತಿ ಎಂದು ಅವನಿಗೆ ಮಾಡುವ ಕೈಂಕರ್ಯವೇ ಪರಮ ಪ್ರಾಪ್ಯವೆಂದು ತಿಳಿದು ಪ್ರತಿಫಲಾಪೇಕ್ಷೆಯಿಲ್ಲದೆ ನಿಷ್ಕಾಮನಿರತನಾಗಿ ಪಾರಂಗತನಾಗುವುದು. ಇದು ಅತ್ಯಂತ ಉತ್ಕೃಷ್ಟವಾದ ಕೈಂಕರ್ಯ. ಈ ಕೈಂಕರ್ಯವನ್ನು ಲಕ್ಷ್ಮಣನೊಬ್ಬನೇ ಪಡೆದನು. ಆದುದರಿಂದಲೇ ವಾಲ್ಮೀಕಿ ಮಹರ್ಷಿಯು ಲಕ್ಷ್ಮಣನನ್ನು "ಲಕ್ಷ್ಮಣೋ ಲಕ್ಷ್ಮಿಸಂಪನ್ನಃ" ಎಂದು ಸಂಬೋಧಿಸಿದ್ದಾರೆ. ಲಕ್ಷ್ಮಿಸಂಪನ್ನತ್ವವೆಂದರೆ ಕೈಂಕರ್ಯವೆಂಬ ಐಶ್ವರ್ಯ.

**ಶ್ರೀ ಎಸ್. ಶ್ರೀನಿವಾಸನ್**

ಲಕ್ಷ್ಮಣನ ಭಗವತ್ ಕೈಂಕರ್ಯ ಅತ್ಯುತ್ತಮವಾದುದು. ಎಲ್ಲಾ ಪ್ರಸನ್ನರಿಗೂ ಅನುಷ್ಠಿತವಾದುದು. ಈ ಕೈಂಕರ್ಯಕ್ಕಿಂತ ಮಿಗಿಲಾದುದು ಬೇರೊಂದಿಲ್ಲ. ಇನ್ನೊಂದು ವಿಶೇಷವೇನೆಂದರೆ ಅವತಾರ ಪ್ರಾರಂಭದಿಂದ ಅವತಾರ ಸಮಾಪ್ತಿಯವರೆಗೂ ಶ್ರೀರಾಮನು ಎಲ್ಲರನ್ನೂ ಬಿಟ್ಟು ಅಗಲಿದ್ದನು. ಆದರೆ ಲಕ್ಷ್ಮಣನನ್ನು ಮಾತ್ರ ಬಿಟ್ಟು ಇರಲಿಲ್ಲ! ಅದೇ ಪ್ರಕಾರ ಲಕ್ಷ್ಮಣನೂ ಸಹ ಶ್ರೀರಾಮನನ್ನು ಬಿಟ್ಟು ಅಗಲಿ ಒಂದು ಕ್ಷಣವೂ ಇರಲಿಲ್ಲ ಶ್ರೀರಾಮನು ತಂದೆ, ತಾಯಿ, ಭರತ, ಶತ್ರುಘ್ನ, ಅಯೋಧ್ಯಾ ಪ್ರಜೆಗಳು ಮತ್ತು ಸೀತಾದೇವಿಯನ್ನು ಕೂಡ ಬಿಟ್ಟು ಇದ್ದನು. ಬಹುಶಃ ಶ್ರೀರಾಮನಿಗೆ ಲಕ್ಷ್ಮಣನ ಕೈಂಕರ್ಯವೊಂದೇ ಪರಮ ಪ್ರಿಯವಾಗಿತ್ತೋ! ಅಷ್ಟು ಲಕ್ಷ್ಮಣನು ಕೈಂಕರ್ಯ ರತಿಯಲ್ಲಿ ನಿಮಗ್ನನಾಗಿದ್ದನು. ಈ ಕೈಂಕರ್ಯ ಭಗವಂತನ ಸನ್ನಿಧಾನದಲ್ಲಿ ನೇರವಾಗಿ ಮಾಡುವ ಕೈಂಕರ್ಯ. ಇದನ್ನು ಪ್ರತ್ಯಕ್ಷ ಭಗವತ್ ಕೈಂಕರ್ಯ ವೆಂದು ಹೇಳುತ್ತಾರೆ.

ಯಾವ ವಿಧವಾಗಿ ಪ್ರತ್ಯಕ್ಷ ಭಗವತ್ ಕೈಂಕರ್ಯ ಅತ್ಯುತ್ತಮವೋ ಅದೇ ರೀತಿಯಲ್ಲಿ ಪರೋಕ್ಷ ಭಗವತ್ ಕೈಂಕರ್ಯವೂ ಸಹ ಅತ್ಯುತ್ತಮವಾದದ್ದು. ಭಗವಂತನಿಗೆ ಪರೋಕ್ಷ ಭಗವತ್ ಕೈಂಕರ್ಯವು ಅಧಿಕ ಪ್ರಿಯಕರವಾದುದು. ಪ್ರತ್ಯಕ್ಷವಾಗಿ ಭಗವತ್ ಕೈಂಕರ್ಯವನ್ನ ಮಾಡಿ ಭಗವಂತನ ಪ್ರೀತಿಗೆ ಪಾತ್ರರಾಗುವುದು ಸಾಮಾನ್ಯವಾದುದು. ಶ್ರೀಪುರಂದರದಾಸರು, ಶ್ರೀತ್ಯಾಗರಾಜರು ಮತ್ತಿತರ ಅನೇಕ ಮಹಾನುಭಾವರೂ, ಭಗವದ್ಭಕ್ತರೂ ಈ ಪಂಥಕ್ಕೆ ಸೇರಿದವರು. ಅದೇ ಕೈಂಕರ್ಯವನ್ನು ಪರೋಕ್ಷನಾಗಿ ಮಾಡಿ ಇತರರಿಗೆ ಅನುಕೂಲ ಮಾಡಿಕೊಟ್ಟು, ಭಗವಂತನ ಅನುಗ್ರಹಕ್ಕೆ ಪಾತ್ರರಾಗುವುದು ಮತ್ತೊಂದು ಮಾರ್ಗ. ಈ ಮಾರ್ಗವನ್ನು ಪರಿಪೂರ್ಣವಾಗಿ ಆಚರಿಸಿ ಪರಮಪ್ರಾಪ್ತಿಯನ್ನು ತಾನಲ್ಲದೆ ಜೊತೆಗೆ ಅಯೋಧ್ಯಾವಾಸಿಗಳೆಲ್ಲರಿಗೂ ಕೂಡ ಅನುಕೂಲ ಮಾಡಿ ತೋರಿಸಿದ್ದಾನೆ, ಆ ಮಹಾನುಭಾವ ಭರತ.

ಭರತ ಭಕ್ತಿ ಅಪ್ರಮೇಯವಾದುದು. ಭರತನ ಭಕ್ತಿಯನ್ನು ಅಳೆಯಲು ಸಾಧ್ಯವಿಲ್ಲ ಆದುದರಿಂದಲೇ ವಾಲ್ಮೀಕಿ ಮಹರ್ಷಿಗಳು "ಭರತಾಯ ಅಪ್ರಮೇಯಾಯ" ಎಂದು ವರ್ಣಿಸಿದ್ದಾರೆ. ಲಕ್ಷ್ಮಣನ ಭಕ್ತಿ ಹುಟ್ಟಿನಿಂದಲೂ ಸಹಜವಾದುದು. ಆದರೆ ಭರತನ ಭಕ್ತಿ ಅಪ್ರಾಕೃತ

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

### ಆಲಯ ಕಾರ್ಯಕ್ರಮ.

| | | |
|---|---|---|
| ಸುಪ್ರಭಾತ | ಬೆಳಗ್ಗೆ | 5–00 ಗಂಟೆಗೆ |
| ಸಹಸ್ರನಾಮಾರ್ಚನೆ | ಬೆಳಗ್ಗೆ | 5–30 ಗಂಟೆಗೆ |
| (ರೂ 6–00 ಶುಲ್ಕದಿಂದ ನಾಲ್ಕು ಮಂದಿಗೆ ಪ್ರವೇಶ) | | |
| 1 ನೇ ಗಂಟೆ | ಬೆಳಗ್ಗೆ | 6–00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ | 6–30 ಗಂಟೆಗೆ |
| ಶುದ್ಧಿ 2 ನೇ ಗಂಟೆ | ಬೆಳಗ್ಗೆ | 11–30 ಗಂಟೆಗೆ |
| ಸರ್ವದರ್ಶನ | ಮಧ್ಯಾಹ್ನ | 12–00 ಗಂಟೆಗೆ |
| 3 ನೇ ಗಂಟೆ | ಸಂಜೆ | 6–00 ಗಂಟೆಗೆ |
| ಸರ್ವದರ್ಶನ | ಸಂಜೆ | 6–30 ಗಂಟೆಗೆ |
| ಶುದ್ಧಿ | ರಾತ್ರಿ | 8–45 ಗಂಟೆಗೆ |
| ಏಕಾಂತ | ರಾತ್ರಿ | 9–00 ಗಂಟೆಗೆ |

### ಶುಕ್ರವಾರಗಳಲ್ಲಿ

| | | |
|---|---|---|
| ಅಭಿಷೇಕ | ಬೆಳಗ್ಗೆ | 9–00 ಗಂಟೆಗೆ |
| (ರೂ 100/– ಶುಲ್ಕದಿಂದ ಒಬ್ಬರಿಗೆ ಪ್ರವೇಶ) | | |
| (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 5/-) | | |
| ಎರಡನೇ ಗಂಟೆ | ಬೆಳಗ್ಗೆ | 11–00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ | 11–30 ಗಂಟೆಗೆ |
| ಊಂಜಲ್‌ಸೇವೆ | ಸಂಜೆ | 7–00 ಗಂಟೆಗೆ |
| (ಮುಖರ ಮಂಟಪದಲ್ಲಿ, ಶುಲ್ಕ ರೂ 150/–) | | |
| (5 ಗ್ರಾಂಗಳ ಬೆಳ್ಳಿಯ ಪದಕ ಬಹುಮಾನ ಉಂಟು) | | |
| 3 ನೇ ಗಂಟೆ | ರಾತ್ರಿ | 8–00 ಗಂಟೆಗೆ |
| ಸರ್ವದರ್ಶನ | ರಾತ್ರಿ | 8–30 ಗಂಟೆಗೆ |
| ಶುದ್ಧಿ | ರಾತ್ರಿ | 9–30 ಗಂಟೆಗೆ |
| ಏಕಾಂತಸೇವೆ | ರಾತ್ರಿ | 9–45 ಗಂಟೆಗೆ. |

**ಪೇಷ್ಕಾರ್.**

ವಾದುದು. ತಾನು ಕನಸಿನಲ್ಲಿಯೂ ಕೂಡ ಅಪೇಕ್ಷೆ ಮಾಡದಿದ್ದ ಸಾಮ್ರಾಜ್ಯವನ್ನು ಅವನ ತಾಯಿ ಕೈಕೇಯಿ ಅವನಿಗೆ ಅತ್ಯಂತ ಹಿತಕರವೆಂದು ತಿಳಿದು ತಂದುಕೊಟ್ಟಳು ತತ್ಫಲಿತವಾಗಿ ನಿರ್ದೋಷಿಯಾದ ಭರತನು ದೋಷಾರೋಪಣೆಗೆ ಮತ್ತು ಪ್ರತಿಯೊಬ್ಬರ ದೂಷಣೆಗೆ ಪಾತ್ರನಾಗಿದ್ದನು. ಆ ವಿಧವಾಗಿ ಅನಾಯಾಸವಾಗಿ ಪಡೆದ ಸಾಮ್ರಾಜ್ಯವನ್ನು ಶ್ರೀರಾಮನ ಪಾದದಲ್ಲಿ ಸಮರ್ಪಿಸಿದನು. ಅಯೋಧ್ಯಾ ಕಾಂಡದಲ್ಲಿ ಭರತ ಶ್ರೀರಾಮರ ಸಂವಾದ ಅತ್ಯಂತ ಹೃದಯಂಗಮವಾದುದು. ಪಾಮರರು, ಪಂಡಿತರು, ಭಕ್ತರು, ವಿದ್ವಾಂಸರು ಎಲ್ಲರೂ ಈ ಸಂವಾದವನ್ನು ಓದಿ, ಕೇಳಿ, ಅನುಭವಿಸಿ ಮುಗ್ಧರಾಗುತ್ತಾರೆ. ಒಂದು ಘಟ್ಟದಲ್ಲಿ ಶ್ರೀರಾಮನಿಗೆ ಭರತನ ಧೃಢಭಕ್ತಿ ವಿಶ್ವಾಸಗಳನ್ನು ನೋಡಿ ಅತ್ಯಾಶ್ಚರ್ಯವಾಗುತ್ತದೆ. ಅಷ್ಟಾದರೂ ಶ್ರೀರಾಮನು ಪಿತೃವಾಕ್ಯ ಪರಿಪಾಲನೆಯೆಂದು ಧೃಢ ನಿಶ್ಚಿತನಾಗಿ ಭರತನ ಪ್ರಾರ್ಥನೆಯನ್ನು ಸ್ವೀಕರಿಸಲಿಲ್ಲ. ಕಾರಣ ಭರತ ತನ್ನ ಭಕ್ತಿ ಭಾವೋದ್ರೇಕದಲ್ಲಿ ಶ್ರೀರಾಮನನ್ನು ಪ್ರಾರ್ಥಿಸುತ್ತಾ ತನ್ನನ್ನರಿಯದೇ –

"ಭ್ರಾತುಃ ಶಿಷ್ಯಸ್ಯ ದಾಸಸ್ಯ ಪ್ರಸಾದಂ ಕರ್ತುಮರ್ಹಸಿ" ಎಂದು ಹೇಳುತ್ತಾನೆ ಇದರಲ್ಲಿ (ಅಯೋಧ್ಯಾಕಾಂಡ 104 ನೇ 12ನೇ ಶ್ಲೋಕ) ಎರಡು ಉಪಾಧಿಗಳು ಸೇರಿವೆ. ಆತ್ಮ ಸಮರ್ಪಣ ಮಾಡುವ ಕಾಲದಲ್ಲಿ ಮೊದಲನೆಯದಾಗಿ ತನ್ನನ್ನು ತಮ್ಮನಾಗಿಯೂ, ಎರಡನೆಯದಾಗಿ ಶಿಷ್ಯನಾಗಿಯೂ ಹೇಳಿಕೊಳ್ಳುತ್ತಾನೆ. ಮೊದಲೆರಡು ಉಪಾಧಿಗಳ ಅಂದರೆ ಭ್ರಾತೃತ್ವ ಮತ್ತು ಶಿಷ್ಯತ್ವಗಳನ್ನು ಕಳೆದುಕೊಂಡು ನಿರುಪಾಧಿಕವಾದ ದಾಸತ್ವವನ್ನು ಪಡೆಯುವುದಕ್ಕಾಗಿ ಶ್ರೀರಾಮಚಂದ್ರನು ಭರತನಿಗೆ 14 ವರ್ಷ (ಒಂದೊಂದು ಉಪಾಧಿಗೆ ಏಳೇಳು ವರ್ಷಗಳಂತೆ) ತನ್ನ ಪಾದುಕಾ ಉಪಾಸನೆಯನ್ನು ಮಾಡುವುದಕ್ಕೆ ತನ್ನ ಪಾದುಕೆಗಳನ್ನು ಭರತನಿಗೆ ದಯಪಾಲಿಸಿದನು ಭರತನೂ ಸಹ ಶ್ರೀರಾಮನ ಆಜ್ಞಾನುಸಾರ ಭಕ್ತಿ ನಿಷ್ಠೆಯಿಂದ ಶ್ರೀರಾಮ ಪಾದುಕಾ ಸೇವೆಯಲ್ಲಿ ತಾನು ಮಾತ್ರವಲ್ಲದೆ ಅಯೋಧ್ಯಾ ವಾಸಿಗಳ ಸಹಿತ ಹದಿನಾಲ್ಕು ವರ್ಷ ಶ್ರೀ ರಾಮ ಪಾದುಕಾಸನ್ನಿಧಿಯಲ್ಲಿ ನಂದಿ ಗ್ರಾಮ ಪಲ್ಲಿ ತಪಸ್ಸು ಮಾಡಿ, ರಾವಣನ ವಧಾನಂತರ ಶ್ರೀ ರಾಮಚಂದ್ರನು ಆಗಮಿಸಿದಾಗ ರಾಜ್ಯವನ್ನು ಪುನಃ ರಾಮನಿಗೆ ಸಮರ್ಪಿಸುತ್ತಾನೆ.
ಆ ಸಂದರ್ಭದಲ್ಲಿ –

"ಯದ್ಯಸ್ಮ್ಯಾಸ್ ಮನುಜೇಂದ್ರತ್ವಂ ಭಕ್ತಾನ್ ಭೃತ್ಯಾನ್ನ ಶಾಧಿಃ" (ಯುದ್ಧಕಾಂಡ 131 ನೇ ಸರ್ಗ, 8ನೇ ಶ್ಲೋಕ) ಎಂದು ಸಮರ್ಪಿಸುತ್ತಾನೆ.

ಮೊದಲು "ಭ್ರಾತುಃ ಶಿಷ್ಯಸ್ಯ ದಾಸಸ್ಯ" ಎಂದು ಹೇಳಿದವನು ಹದಿನಾಲ್ಕು ವರ್ಷ ಶ್ರೀರಾಮ ಪಾದುಕಾ ಉಪಾಸನಾ ನಂತರ "ಭಕ್ತಾನ್ ಭೃತ್ಯಾನ್ ಶಾಧಿ" ಎಂದು ಪರಿವರ್ತನೆಗೊಂಡು ಹೇಳುತ್ತಾನೆ. ಭ್ರಾತೃತ್ವ ಶಿಷ್ಯತ್ವೋಪಾಧಿಗಳು ಕಳೆದು ನಿರುಪಾಧಿಕವಾದ ಭಕ್ತಿಪ್ರಪತ್ತಿಗಳಿಂದ ಶರಣಾಗತನಾಗಿರುತ್ತಾನೆ. ಇಲ್ಲಿ ಕೂಡಾ "ಸರ್ವ ಧರ್ಮಾನ್ ಪರಿತ್ಯಜ್ಯ" ಎಂಬ ಗೀತಾ ವಾಕ್ಯಾರ್ಥವು ಪರಿಪೂರ್ಣವಾಗಿ ವಿಶದವಾಗುತ್ತದೆ. ಇಲ್ಲಿ ಸರ್ವ ಧರ್ಮಾನ್ ಎಂಬುದಕ್ಕೆ ಸರ್ವೋಪಾಧಿಗಳು ಎಂದು ತಿಳಿಯಬೇಕು. ಲಕ್ಷ್ಮಣನಲ್ಲಿ ಯಾವ ವಿಧವಾದ ಉಪಾಧಿಗಳೂ ಇಲ್ಲಿಲ್ಲ. ಭರತನಲ್ಲಿ ಉಪಾಧಿಗಳಿದ್ದ ಸಮಯದಲ್ಲಿ ಅದನ್ನು ಶ್ರೀರಾಮಚಂದ್ರನು ಸ್ವೀಕರಿಸಲಿಲ್ಲ. ಅದು ನಿರುಪಾಧಿಕವಾದ ನಂತರ ನಿರ್ಹೇತುಕವಾಗಿ ಸ್ವೀಕರಿಸಲ್ಪಟ್ಟಿತು. ಇದು ಪರೋಕ್ಷ ಕೈಂಕರ್ಯ. ಇದರಲ್ಲಿ ವಿಶಿಷ್ಟವಾದುದು ಏನೆಂದರೆ ಆ ಭಗವಂತನ ಪಾದ ಸಾನ್ನಿಧ್ಯ ಎಲ್ಲರಿಗೂ ಸುಲಭಸಾಧ್ಯ. ಅವನ ಪಾದ ಸದಾ ನಮ್ಮ ಶಿರಸ್ಸಿನ ಮೇಲೆ ಇರುತ್ತದೆ. ವಾಮನಾವತಾರದಲ್ಲಿ ಮೂರು ಅಡಿ ಜಾಗ ಅಳೆಯುವಾಗ ಒಂದು ಪಾದದಿಂದ ಆಕಾಶವನ್ನೆಲ್ಲಾ ಅಳೆದನು. ಆ ಪಾದ ಸದಾ ನಮ್ಮ ಶಿರಸ್ಸಿನ ಮೇಲಿದ್ದು ನಮ್ಮನ್ನು ರಕ್ಷಿಸುತ್ತಲೇ ಇರುತ್ತದೆ. ಸತ್ಸಂಗದಿಂದ, ಮಹಾ ಭಗವದ್ಭಕ್ತರೂ, ಭಾಗವತೋತ್ತಮರೂ, ಆಳ್ವಾರರೂ, ಆಚಾರ್ಯಾದಿಗಳೆಲ್ಲರ ಅನುಗ್ರಹದಿಂದ, ಭಗವತ್ ಕೈಂಕರ್ಯದಲ್ಲಿ ಅಭಿರುಚಿ ಪಡೆದು ಪರಮ ಪ್ರಾಪ್ತಿಗೆ ಅರ್ಹರಾಗುವುದು ಸುಲಭಸಾಧ್ಯ. ಹಾಗಲ್ಲದೆ ತಮ್ಮೊಡನೆ ಭರತನಂತೆ ಸಾಮಾನ್ಯ ಜನರನ್ನೂ ಕೂಡಾ ಭಗವತ್ ಕೈಂಕರ್ಯದಲ್ಲಿ ತೊಡಗಿಸುವುದನ್ನು ಪರೋಕ್ಷ ಭಗವತ್ ಕೈಂಕರ್ಯ ಎನ್ನುತ್ತಾರೆ. ಇದನ್ನೇ ಮಾನವ ಸೇವೆಯೇ ಮಾಧವ ಸೇವೆಯೆಂದು, ಜನಸೇವೆಯೇ ಜನಾರ್ದನನ ಸೇವೆಯೆಂದು ತಿಳಿಯುವುದು. ಸಾಮಾನ್ಯ ಜನರಿಗೆ ಇದು ಸುಲಭ ಸಾಧ್ಯವಾಗಿದೆ.

ಈ ಮೇಲೆ ಹೇಳಿದ ಎರಡೂ ಕೈಂಕರ್ಯಗಳಿಗೆ ಮಿಗಿಲಾದುದು ಎಂದರೆ ಇನ್ನೊಂದು ಕೈಂಕರ್ಯ. ಅದು ಭಾಗವತ ಕೈಂಕರ್ಯ. ಮೇಲೆ ಹೇಳಿದಂತೆ ಲಕ್ಷ್ಮಣನ ಕೈಂಕರ್ಯ ಭಗವತ್ ಕೈಂಕರ್ಯ. ಅದು ಪ್ರತ್ಯಕ್ಷ ಭಗವತ್ ಕೈಂಕರ್ಯ. ಭರತನ ಕೈಂಕರ್ಯ ಕೂಡಾ ಭಗವತ್ ಕೈಂಕರ್ಯವೇ ಆದರೆ ಅದು ಪರೋಕ್ಷ ಕೈಂಕರ್ಯ. ಈ ಎರಡಕ್ಕಿಂತಲೂ ಅತಿ ಉತ್ತಮವಾದುದು ಭಾಗವತ ಕೈಂಕರ್ಯ. ಈ ಕೈಂಕರ್ಯದಲ್ಲಿ ಅಗ್ರೇಸರನು ಶತ್ರುಘ್ನ! ಶತ್ರುಘ್ನ ತನ್ನ ಇತರೆ ಮೂರು ಅಣ್ಣಂದಿರ ಕೈಂಕರ್ಯದಲ್ಲಿಯೇ ತನ್ನ ಜೀವನವನ್ನು ಕಳೆದನು. ಅಷ್ಟೇ ಅಲ್ಲ, ಶತ್ರುಘ್ನನು ಲಕ್ಷ್ಮಣ ಮತ್ತು ಭರತರಂತೆ ಪ್ರಬಲವಾಗಿರದೆ ಹಿನ್ನೆಲೆಯಲ್ಲೇ ಇದ್ದನು. ಯಾವ ಫಲಾಪೇಕ್ಷೆಯನ್ನೂ ಉದ್ದೇಶಿಸಿ ಕೈಂಕರ್ಯವನ್ನು ಮಾಡಲಿಲ್ಲ. ಕೊನೆಯವರಿಗೆ ಭಗವದ್‌ಭಕ್ತನೂ, ಭಾಗವತೋತ್ತಮನೂ ಆದ ಭರತನ ಜೊತೆಯಲ್ಲೇ ಕೈಂಕರ್ಯಕ್ಕಾಗಿಯೇ ಕೈಂಕರ್ಯವನ್ನು ಮಾಡಿದನು. ಅದು ಆದರಿಂದಲೇ ವಾಲ್ಮೀಕಿಯು ಶತ್ರುಘ್ನ ನನ್ನು "ಶತ್ರುಘ್ನೋ ನಿತ್ಯ ಶತ್ರುಘ್ನಃ" ಎಂದು ವರ್ಣಿಸಿರುತ್ತಾರೆ. ನಿತ್ಯ ಶತ್ರುಘ್ನ ಎಂದರೆ ಭಾಗವತ ಕೈಂಕರ್ಯದಲ್ಲಿ ಬರುವ ಅರಿಷ್ಟಗಳನ್ನು ನಿವಾರಿಸುವವನು ಎಂದರ್ಥ. ಈ ಭಾಗವತ ಕೈಂಕರ್ಯಕ್ಕೆ ಯಾವ ವಿಧವಾದ ಅರ್ಹತೆ ಬೇಕಾಗಿಲ್ಲ ಇದಕ್ಕೆ ಎಲ್ಲರೂ ಅರ್ಹರು.

ಭಗವತ್ ಕೈಂಕರ್ಯದಲ್ಲಿ ನಿತ್ಯವೂ ಪರಮಾನಂದ ಪ್ರಾಪ್ತಿಯನ್ನು ಪಡೆದುಕೊಂಡಿರುವುದು, ಆ ಕ್ಷೀರಾಬ್ಧಿಯಲ್ಲಿ ಶೇಷಶಯನನಾದ ಶ್ರೀಮನ್ನಾರಾಯಣನ ಪಾದಗಳನ್ನು ಒತ್ತುತ್ತಿರುವ ಶ್ರೀಮಹಾಲಕ್ಷ್ಮೀ. ಆದಕ್ಕೇ ಶ್ರೀ ಪುರಂದರದಾಸರು — "ಏನು ಧನ್ಯಳೋ ಲಕುಮಿ ಎಂಥ ಮಾನ್ಯಳೋ" ಎಂದು ಹಾಡಿದ್ದಾರೆ.

ಈ ಮೇಲೆ ಹೇಳಿದಂತೆ, ಲಕ್ಷ್ಮೀಸಂಪನ್ನನಾದ ಲಕ್ಷ್ಮಣನು, ಅಪ್ರಮೇಯನಾದ ಭರತನು ಮತ್ತು ನಿತ್ಯ ಶತ್ರುಘ್ನನಾದ ಶತ್ರುಘ್ನನು ಭಗವತ್ ಭಾಗವತ ಕೈಂಕರ್ಯದಲ್ಲಿ ನಿಮಗ್ನರಾಗಿ ಅನುಭವಪೂರ್ವಕವಾಗಿ ಅಚಂಚಿ ವಿಶ್ವ ಕಲ್ಯಾಣಕ್ಕೆ ಮಾರ್ಗದರ್ಶಕರಾಗಿದ್ದಾರೆ ಇವರೆಲ್ಲರಿಗೂ ಸಹಜವಾಗಿ ಭಗವತ್ ಕೈಂಕರ್ಯದಲ್ಲಿ ಅಭಿರುಚಿಯಿದ್ದಿತು ಅವರೆ ರಾವಣಾನುಜನಾದ ವಿಭೀಷಣನು, ರಾಕ್ಷಸ ಕುಲದಲ್ಲಿ ಹುಟ್ಟಿಯೂ, ಧರ್ಮಚ್ಯುತನಾದ ಅಣ್ಣ ರಾವಣನನ್ನು, ಎಲ್ಲಾ ಧರ್ಮಗಳನ್ನೂ ಕ್ಷಣ ಮಾತ್ರದಲ್ಲಿ ತ್ಯಜಿಸಿ "ಉತ್ಪಪಾತ ಗದಾಪಾಣಿಃ ಚತುರ್ಭಿಃ ಸಹರಾಕ್ಷಸೈಃ" (ಯುದ್ಧ ಕಾಂಡ— 6 ನೇ ಸರ್ಗ, 20 ನೇ ಶ್ಲೋಕ) ಆ ಕ್ಷಣವೇ ತನ್ನ ನಾಲ್ಕು ಸಚಿವ ರಾಕ್ಷಸರೊಡನೆ ಆಕಾಶಮಾರ್ಗದಿಂದ "ರಾಮೋವಿಗ್ರಹವಾನ್ ಧರ್ಮಃ" ಅಂದರೆ ಧರ್ಮವೇ ಮೂರ್ತೀಭವಿಸಿದಂತೆ ಇರುವ ರಾಮನನ್ನು ಶರಣಾಗತಿ ಹೊಂದಿದನು. ರಾಕ್ಷಸ ಕುಲದಲ್ಲಿ ಹುಟ್ಟಿದ್ದರೂ ವಿಭೀಷಣನು ಭಗವತ್ ಕೈಂಕರ್ಯದಿಂದ ಆಕರ್ಷಿಸಲ್ಪಟ್ಟು ಆ ಶ್ರೀರಾಮನ ಪಾದ ಸಾನ್ನಿಧ್ಯದಲ್ಲಿ ಬಂದು ಸೇರಿದನು. ಇಲ್ಲಿಯೂ ಸಹ "ಸರ್ವ ಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ" ಎಂಬ ಗೀತಾ ಮಹಾ ವಾಕ್ಯಾರ್ಥ ಪರಿಪೂರ್ಣವಾಗಿ ವಿಶದವಾಗುತ್ತದೆ. ಲಂಕೆಯನ್ನೂ, ಭಾರ್ಯಾ ಪುತ್ರರನ್ನೂ, ಬಂಧುಮಿತ್ರರನ್ನೂ ಎಲ್ಲರನ್ನೂ ತ್ಯಜಿಸಿ ರಾಮನನ್ನು ಶರಣು ಹೊಂದಿದನು ವಿಭೀಷಣನು ರಾಮನನು ನೋಡಿರಲಿಲ್ಲ ರಾಮನ ಧರ್ಮ, ಸತ್ಯನಿಷ್ಠೆ ಮತ್ತು ಇತರ ಕಲ್ಯಾಣ ಗುಣಗಳನ್ನು ಕೇಳಿ ಮುಗ್ಧನಾಗಿ ರಾಮನ ಸೇವಾಭಿಲಾಷಿತನಾಗಿ ಶ್ರೀರಾಮಪಾದದಲ್ಲಿ ಬಂದು ಸೇರಿದನು ಇದು ಎಲ್ಲರಿಗೂ ಮಾರ್ಗದರ್ಶಕವಾಗಿದೆ. ಸಜ್ಜನನಾಗಿರಲಿ, ದುರ್ಜನನಾಗಿರಲಿ, ತಾಪತ್ರಯಗಳಿಗೊಳಗಾಗಿರಲಿ, ಯಾವುದೇ ಅವಸ್ಥೆಯಲ್ಲಿರಲಿ, ಯಾರೇ ಆಗಲಿ ಆ ಪರಮಾತ್ಮನೇ ಗತಿ ಎಂದು ಅವನಲ್ಲಿ ಶರಣು ಹೊಂದುತ್ತಾರೋ ಅವರಿಗೆ ನಿಸ್ಸಂಶಯವಾಗಿ ಪರಮಾನಂದ ಪ್ರಾಪ್ತಿಯುಂಟಾಗುತ್ತದೆ. ವಿಭೀಷಣನು ಅಧರ್ಮ ಪಕ್ಷದಲ್ಲಿರುವ ರಾವಣನನ್ನು ತ್ಯಜಿಸಿ, ಧರ್ಮವೇ ಮೂರ್ತಿಯಾಗಿರುವ ರಾಮನ ಪಕ್ಷಕ್ಕೆ ತನ್ನ ವಿವೇಚನಾ ಶಕ್ತಿಯಿಂದ ಬಂದು ಸೇರಿದುದರಿಂದಲೇ, ವಾಲ್ಮೀಕಿ ಮಹರ್ಷಿಗಳು ವಿಭೀಷಣನನ್ನು "ಬುದ್ಧಿಮತಾಂ ವರಿಷ್ಠ" ಎಂದು ವರ್ಣಿಸಿರುತ್ತಾರೆ.

ಲಕ್ಷ್ಮೀ ಸಂಪನ್ನವಾದ ಲಕ್ಷ್ಮಣನ ಸಹಜವಾದ ನಿರುಪಾಧಿಕ ಕೈಂಕರ್ಯ ಪ್ರತ್ಯಕ್ಷ ಭಗವತ್ ಕೈಂಕರ್ಯ. ಇದು ಭಗವಂತನಿಗೆ ಪ್ರಿಯಕರವಾದುದು. ಅಪ್ರಮೇಯನಾದ ಭರತನ ಅಪ್ರಾಕೃತವಾದ ಕೈಂಕರ್ಯ ಪರೋಕ್ಷ ಭಗವತ್ ಕೈಂಕರ್ಯ, ಇದು ಭಗವಂತನಿಗೆ ಅಧಿಕ ಪ್ರಿಯಕರವಾದುದು. ನಿತ್ಯ ಶತ್ರುಘ್ನನಾದ ಶತ್ರುಘ್ನನ ಕೈಂಕರ್ಯ ಭಾಗವತ ಕೈಂಕರ್ಯ. ಇದು ಭಗವಂತನಿಗೆ ಅತ್ಯಧಿಕ ಪ್ರಿಯಕರವಾದುದು. ಬುದ್ಧಿಮತಾಂ ವರಿಷ್ಠನಾದ ವಿಭೀಷಣನ ಕೈಂಕರ್ಯ "ಲೋಕೋತ್ತರ ಭಗವತ್‌ಕೈಂಕರ್ಯ". ಇದು ಭಗವಂತನಿಗೆ ಅತ್ಯಂತ ಅಧಿಕ ಪ್ರಿಯಕರವಾದುದು. ಅವರವರ ಗುಣಗಳಿಗೆ ತಕ್ಕಂತೆ ಭಗವತ್ ಕೈಂಕರ್ಯವನ್ನು ಅರಿಸಿಕೊಳ್ಳಬಹುದು.

ಇವೆಲ್ಲವನ್ನೂ ಮನದಲ್ಲಿ ಇಟ್ಟುಕೊಂಡು ಶ್ರೀ ರಾಮಾನುಜರು ತಮ್ಮ ಶರಣಾಗತಿ ಗದ್ಯದಲ್ಲಿ ಈ ಕೆಳಕಂಡಂತೆ ಮನಕರಗುವ ಪ್ರಾರ್ಥನೆಯನ್ನು ಮಾಡಿದ್ದಾರೆ.

ಪರಭಕ್ತಿ ಪರಜ್ಞಾನ ಪರಮಭಕ್ತಿ
ಕೃತ ಪರಿಪೂರ್ಣ
ಅನವರತ ನಿತ್ಯವಿಶದತಮಾನನ್ಯ
ಪ್ರಯೋಜನಾನವಧಿ —
ಕಾತಿಶಯ ಪ್ರಿಯ ಭಗವದನು
ಭವೋಹಂ, ತಥಾವಿಧ
ಭಗವದನುಭವ ಜನಿತಾ ನವಧಿಕಾತಿಶಯ
ಪ್ರೀತಿಕಾರಿತಾ —
ಶೇಷಾವಸ್ಥೋಚಿತ, ಅಶೇಷಶ್ಶೇಷ
ರೂಪ ನಿತ್ಯ ಕಿಂಕರೋ ಭವಾನಿ

— ಈ ಬಗೆಯ ಪರಭಕ್ತಿ, ಪರಜ್ಞಾನ, ಪರಮಭಕ್ತಿಗಳಿಂದುಂಟಾದ ಭಗವದನುಭವವು ಪರಿಪೂರ್ಣವಾದದ್ದು. ಎಡೆಬಿಡದೆ ನಿರಂತರವಾಗಿರುವುದು. ಅದು ನಿತ್ಯವೂ, ವಿಶದತಮವೂ ಆದರೂ ಅದಕ್ಕೆ ಈ ಅನುಭವದಿಂದ ಬರುವ ಸುಖದ ಹೊರತು ಬೇರಾವುದೊಂದು ಪ್ರಯೋಜನವೂ ಇರುವುದಿಲ್ಲ. ಅದು ಎಷ್ಟು ಪ್ರಿಯವೆಂಬುದನ್ನು ಯಾರೂ ಹೇಳಲಾರದಷ್ಟು ಅಪಾರವಾದುದು. ಈ ಬಗೆಯ ದಿವ್ಯಾನುಭವದಿಂದ ಹುಟ್ಟಿ ಬರುವ ಭಗವತ್ಪ್ರೇಮವು ನಿರತಿಶಯ ಭಕ್ತಿಯ ಇನ್ನೊಂದು ಎತ್ತರ. ಇದರ ಫಲವೇನೆಂದರೆ, ಇಷ್ಟು ನಿರತಿಶಯ ಭೋಗ್ಯನಾದ ಭಗವಂತನಿಗೆ ಎಲ್ಲಾ ಅವಸ್ಥೆಗಳಲ್ಲೂ ಶೇಷನಾಗಿರಬೇಕೆಂಬುದೇ, (ಅವನನ್ನು ಬಿಟ್ಟಗಲದೆ, ಅವನಿಗಾಗಿಯೇ ತಾನು ಎಲ್ಲ ರೀತಿಯಲ್ಲೂ ಸೇವೆಗಾಗಿ ಇರುವುದೇ ಶೇಷತ್ವವೆಂಬುದು). ಇಂಥ ಶೇಷತ್ವ ಗುಣವು ನನಗೆ ಎಂದೆಂದೂ ನಷ್ಟವಾಗದಂತೆ, ಇದೇ ನನ್ನ ಸ್ವರೂಪ ನಿರೂಪಕಧರ್ಮವಾಗಿರುತ್ತಾ, ಭಗವಂತನಾದ ನಿನ್ನ ನಿತ್ಯ ಕಿಂಕರನು ನಾನಾಗುವಂತೆ ನನ್ನನುಗ್ರಹಿಸು!

ಸಪ್ತಗಿರಿನಾಥನಾದ ಶ್ರೀ ವೆಂಕಟೇಶ್ವರ ಸ್ತೋತ್ರದಲ್ಲಿ ಈ ಕೆಳಕಂಡ ಸ್ತೋತ್ರವನ್ನು ಸ್ತುತಿಸಲಾಗಿದೆ.

ಅಹಂ ದೂರತಸ್ತೇ ಪದಾಂಭೋಜಯುಗ್ಮ
ಪ್ರಣಾಮೇಚ್ಛಯಾಽಗತ್ಯ ಸೇವಾಂ ಕರೋಮಿ
ಸಕೃತ್ ಸೇವಯಾ ನಿತ್ಯ ಸೇವಾ ಫಲಂ ತ್ವಂ
ಪ್ರಯಚ್ಛ ಪ್ರಯಚ್ಛ ಪ್ರಭೋ ವೇಂಕಟೇಶ

ನಾನು ದೂರದಿಂದ ನಿನ್ನ ಪಾದಕಮಲಗಳಿಗೆ ಡಕ್ಕೆ ಪ್ರಣಾಮ ಮಾಡುವ ಇಚ್ಛೆಯಿಂದ ಬಂದು ಸೇವೆ ಮಾಡುತ್ತಿದ್ದೇನೆ. ಒಂದು ಬಾರಿ ಮಾಡಿದ ಈ ಸೇವೆಯಿಂದ, ಪ್ರಭುವೇ, ವೆಂಕಟೇಶ, ನೀನು ನಿತ್ಯ ಸೇವೆಯ ಫಲವನ್ನು ದಯಪಾಲಿಸು ಶ್ರೀ ವೆಂಕಟೇಶ ಪ್ರಪತ್ತಿಯಲ್ಲಿ ಕೊನೆಗೆ–

ಶ್ರೀಶ ಶ್ರಿಯಾ ಘಟಿಕಯಾ ತ್ವದುಪಾಯ ಭಾವೇ
ಪ್ರಾಪ್ಯೇ ತ್ವಯಿ ಸ್ವಯಮುಪೇಯ
ತಯಾ ಸ್ಫುರಂತ್ಯಾ
ನಿತ್ಯಾಶ್ರಿತಾಲಯ ನಿರವದ್ಯ ಗುಣಾಯ ತುಭ್ಯಂ
ಸ್ಯಾಂ ಕಿಂಕರೋ ವೃಷಗಿರೀಶ
ನ ಜಾತು ಮಹ್ಯಮ್

ಹೇ ಶ್ರೀಶ, ನೀನು ಉಪಾಯಭೂತ, ಶ್ರೀಯು ಸಂಘಟಿಸುವಾಕೆ, ನೀನು ಪ್ರಾಪ್ಯ. ತಾನೇ ಉಪೇಯಭಾವವನ್ನು ಹೊಂದಿ ಹೊಳೆಯುತ್ತಾ ನಿತ್ಯ ಆಶ್ರಿತನಾಗಿ, ನಿರ್ದುಷ್ಟವಾದ ಗುಣಗಳುಳ್ಳವನಾಗಿ ಇರುವ ನಿನಗೆ ಕಿಂಕರನಾಗಿದ್ದೇನೆ. ವೃಷಗಿರೀಶ, ನಾನು ಎಂದಿಗೂ ನನಗೆ ಕಿಂಕರನಲ್ಲ.

ಇದನ್ನೇ ಶ್ರೀರಾಮಾನುಜಾಚಾರ್ಯರು ತಮ್ಮ ಶರಣಾಗತಿ ಗದ್ಯದಲ್ಲಿ "ಹೇ ಪರಮಾತ್ಮಾ ನಿನ್ನ ನಿತ್ಯ ಕೈಂಕರ್ಯವು ನನಗೆ ಪ್ರಾಪ್ತವಾಗಲು, ನನ್ನ ಪ್ರಾಣಾವಸಾನ ಕಾಲದಲ್ಲಿ ನೀನಾಗಿಯೇ ನನಗೆ ಉಂಟು ಮಾಡುವ ನಿನ್ನ ಸ್ಮೃತಿಯನ್ನು ಈಗಲೂ (ಈಗಲೇ) ನನಗೆ ಆಗುತ್ತಿರುವಂತೆ ಅನುಗ್ರಹಿಸು" ಎಂದು ಪ್ರಾರ್ಥಿಸುತ್ತಾರೆ.

ಅಂತ್ಯಕಾಲೇ ಸ್ಮೃತಿರ್ಯಾತು
ತವ ಕೈಂಕರ್ಯಕಾರಿತಾ
ತಾಮೇನಾಂ ಭಗವನ್ ಅದ್ಯ
ಕ್ರಿಯಮಾಣಾಂ ಕುರುಷ್ವಮೇ



# ಪಾಳ್ಯ ಕ್ಷೇತ್ರದ ಜನಾರ್ದನ ಸ್ವಾಮಿ

ಜಗತ್ತಿನ ಉಳಿವಿಗೆ ಕಾರಣವಾದ ಧರ್ಮಕ್ಕೆ ಗ್ಲಾನಿ ಸಂಭವಿಸಿ, ಎಲ್ಲೆಲ್ಲಿಯೂ ಅಧರ್ಮ ತಲೆಯೆತ್ತಿ ಮೆರೆಯುತ್ತಿರುವಾಗ ಧರ್ಮ ಸ್ಥಾಪನೆ ಹಾಗೂ ಅಧರ್ಮದ ನಾಶಕ್ಕಾಗಿ ಅವತರಿಸುವವನು ಭಗವಂತ. ಈ ದಿಶೆಯಲ್ಲಿ ವೈಕುಂಠಾಧಿಪತಿಯಾದ ಶ್ರೀಮನ್ನಾರಾಯಣನ ಮತ್ಸ್ಯಾದಿ ದಶಾವತಾರಗಳು ಪ್ರಸಿದ್ಧವಾಗಿದ್ದರೂ, ಇದರಂತೆಯೇ ಇನ್ನೂ ಕೆಲವು ಅವತಾರ ವಿಶೇಷಗಳು ನಮ್ಮ ಪುರಾಣಗಳಲ್ಲಿ ಉಲ್ಲೇಖಿಸಲ್ಪಟ್ಟಿವೆ. ಇವುಗಳಲ್ಲಿ "ಜನಾರ್ದನ" ಎಂಬುದೊಂದು.

"ಜನ" ಎಂಬ ಲೋಕಕಂಟಕರಾದ ರಾಕ್ಷಸರು ಸಮುದ್ರದೊಳಗೆ ಅಡಗಿದ್ದು ಜಗತ್ತಿಗೆ ಬಾಧಕರಾದ ಅವರೆಲ್ಲರನ್ನು ಸಂಹರಿಸಿದವನಾದುದರಿಂದ "ಜನಾರ್ದನ" ಎಂದು ಪ್ರಸಿದ್ಧನಾದ. ಈತ ಪಿತೃಮೋಕ್ಷಪ್ರದಾತೃ, ಅಂತೆಯೇ ವಾಸ ಗಯಾಕ್ಷೇತ್ರ.

ಜನರು ಅಪೇಕ್ಷಿಸುವ ಸಕಲ ಪುರುಷಾರ್ಥಗಳ ಕರುಣಿಸುವವನು ಎಂಬ ಅರ್ಥವೂ 'ಜನಾರ್ದನ" ಎಂಬ ಪದದ ವಿಶ್ಲೇಷಣೆಯಿಂದ ತಿಳಿಯುತ್ತದೆ. ಅಂತಹ ಜನಾರ್ದನನ ಪುಣ್ಯಕ್ಷೇತ್ರ "ಪಾಳ್ಯ".

ಹಾಸನ ಜಿಲ್ಲೆಯ ಆಲೂರು ತಾಲ್ಲೂಕಿಗೆ ಸೇರಿದ ಈ ಕ್ಷೇತ್ರದ ಮಹಾತ್ಮೆ ಸ್ಕಂದ ಪುರಾಣೋಕ್ತವಾಗಿದೆ. ಸೂತಮಹರ್ಷಿಗಳು ಅಗಸ್ತ್ಯರ್ಷಿಗಳಿಗೆ ಈ ಸ್ಥಳ ಮಹಾತ್ಮೆಯನ್ನು ಅವರ ಪ್ರಾರ್ಥನೆಯಂತೆ ತಿಳಿಸಿದ್ದಾರೆ. ಈ ಮಹಾತ್ಮೆ ಹದಿನೆಂಟು ಅಧ್ಯಾಯಗಳನ್ನು ಒಳಗೊಂಡಿದೆ.

ಭಾರತ ತೀರ್ಥಕ್ಷೇತ್ರಗಳ ಅಂತೆಯೇ ಪುಣ್ಯಕ್ಷೇತ್ರಗಳ ನೆಲವೀಡು. ಆದರೆ ಈ ಕ್ಷೇತ್ರಗಳು ಯಾವುದೇ ಒಂದು ಯುಗಕ್ಕೆ ಹಾಗೆಯೇ ಒಬ್ಬ ವ್ಯಕ್ತಿಗೆ ಸಂಬಂಧಿಸಿದ್ದು. ಆದರೆ ಈ ಪಾಳ್ಯಕ್ಷೇತ್ರ ಅಂತಿಲ್ಲ. ಯುಗ ಚತುಷ್ಟಯಗಳಲ್ಲಿಯೂ, ಭಿನ್ನ ಭಿನ್ನವಾದ ಫಲಾಪೇಕ್ಷೆಯಿಂದ ಪ್ರತ್ಯೇಕ ವ್ಯಕ್ತಿಗಳ ತಪೋಭೂಮಿಯಾಗಿದ್ದು, ಇಲ್ಲಿನ ಶ್ರೀ ಜನಾರ್ದನಸ್ವಾಮಿ, ಅವರೆಲ್ಲರ ಮನೋರಥಗಳನ್ನು ಸಫಲಗೊಳಿಸಿದ್ದಾನೆ.

ಭಗವದವತಾರದ ಪ್ರಥಮ ಉದ್ದೇಶ್ಯ ದುಷ್ಟ ರಾಕ್ಷಸರ ಸಂಹಾರ. ಪಾಳ್ಯದ ಜನಾರ್ದನನ ಅವತಾರವೂ ಅಂತೆಯೇ ದುಷ್ಟನಾದ "ವಿಕಂಕ" ಎಂಬ ರಾಕ್ಷಸನ ಸಂಹಾರಕ್ಕಾಗಿ. ಈತ ರಾಮನಾಥಪುರದ ಶ್ರೀ ರಾಮೇಶ್ವರನನ್ನು ಭಕ್ತಿಯಿಂದ ಆರಾಧಿಸಿ, ಆತನ ಅನುಗ್ರಹದಿಂದ ಸರ್ವೋತ್ತಮತ್ವವನ್ನು ಪಡೆದು, ತ್ರಿಲೋಕಕಂಟಕನಾದ. ಈತನ ಬಾಧೆಯನ್ನು ತಾಳಲಾರದ ಇಂದ್ರಾದಿ ದೇವತೆಗಳು ವೈಕುಂಠಾಧಿಪತಿಯಾದ ಶ್ರೀಮನ್ನಾರಾಯಣನನ್ನು ಮರೆಹೊಕ್ಕಾಗ, ಆತ ಈ ದೇವತೆಗಳಿಗೆ ಅಭಯಪ್ರದಾನ ಮಾಡುತ್ತ, ತಾನು ಮತ್ತೊಮ್ಮೆ ಭೂಲೋಕದಲ್ಲಿ ಅವತರಿಸುವುದಾಗಿ ನುಡಿದ. ಅದರಂತೆ ಅವತರಿಸಿ, ತನ್ನ ಕಾರ್ಯವಾದ ನಂತರ ಪಾಳ್ಯಕ್ಷೇತ್ರದಲ್ಲಿ ನೆಲೆಸಿದವನು "ಜನಾರ್ದನಸ್ವಾಮಿ".

ಪೂರ್ವದಲ್ಲಿ ವಿಕಂಕಾಸುರನಿಗೆ ಒಲಿದ ರಾಮನಾಥೇಶ್ವರನ ಅನುಗ್ರಹವನ್ನು ಪಡೆಯುವ ಸಲುವಾಗಿ ಜನಾರ್ದನನಾದ ಶ್ರೀಮನ್ನಾರಾಯಣನು ವಟುವೇಷಧಾರಿಯಾಗಿ, ರಾಮನಾಥಕ್ಷೇತ್ರಕ್ಕೆ ಬಂದು, ಆತನನ್ನು ಭಕ್ತಿಯಿಂದ ಆರಾಧಿಸಿದನು. ಪ್ರತ್ಯಕ್ಷನಾಗಿ ಅನುಗ್ರಹಿಸಿದ ರಾಮನಾಥನಿಂದ ಚಕ್ರಾಯುಧವನ್ನು ತೆಗೆದುಕೊಂಡು, ಪಾಳ್ಯದಲ್ಲಿ ವಾಸಮಾಡುತ್ತಿದ್ದ ವಿಕಂಕಾಸುರನನ್ನು ಸಂಹರಿಸಿ, ಜಗತ್ತಿಗೆ ಬಂದಿದ್ದ ಕಷ್ಟವನ್ನು ಪರಿಹರಿಸಿದನು.

ಕ್ಷೀರಸಾಗರ ಸಂಭವೆಯಾದ ಲಕ್ಷ್ಮೀದೇವಿಯು ಶ್ರೀಮನ್ನಾರಾಯಣನನ್ನೇ ಪತಿಯನ್ನಾಗಿ ಪಡೆಯಬೇಕೆಂಬ ಇಚ್ಛೆಯಿಂದ ಈ ಪಾಳ್ಯ ಕ್ಷೇತ್ರಕ್ಕೆ ಬಂದು ಜನಾರ್ದನ ಸ್ವಾಮಿಯನ್ನು ಭಕ್ತಿಯಿಂದ ಆರಾಧಿಸಿ. ತನ್ನ ಇಷ್ಟಾರ್ಥವನ್ನು ಸಾಧಿಸಿಕೊಂಡಳು.

ಶ್ರೀ ಪಿ. ಎನ್. ಕೃಷ್ಣಪ್ಪ

ಆದುದರಿಂದಲೇ ಯುಗಾಂತರದಲ್ಲಿ ಈ ಕ್ಷೇತ್ರಕ್ಕೆ "ಪದ್ಮಾವತೀಪುರ" ಎಂಬ ನಾಮಕರಣವಿತ್ತು.

ಯಜ್ಞಕಾರ್ಯದಲ್ಲಿ ನಿಯಮಿಸಿದ 'ತ್ವಷ್ಟೃ'ವು ರಾಕ್ಷಸ ಪಕ್ಷಪಾತಿ ಎಂದು ತಿಳಿದು ದೇವೇಂದ್ರನು ಆತನನ್ನು ತನ್ನ ವಜ್ರಾಯುಧದಿಂದ ಸಂಹರಿಸಿದನು. ಬ್ರಾಹ್ಮಣನನ್ನು ಸಂಹರಿಸಿದ್ದರಿಂದ ಈತನಿಗೆ ಬ್ರಹ್ಮಹತ್ಯಾದೋಷವು ತಗುಲಿತು. ಈ ದೋಷವನ್ನು ನಿವೃತ್ತಿಗೊಳಿಸಿಕೊಳ್ಳುವುದಕ್ಕಾಗಿ ತಮ್ಮ ಆಚಾರ್ಯರಾದ ಬೃಹಸ್ಪತಿಗಳ ಸಲಹೆಯಂತೆ ಈ ಪುಣ್ಯಕ್ಷೇತ್ರದ ಜನಾರ್ದನಸ್ವಾಮಿಯನ್ನು ಭಕ್ತಿಯಿಂದ ಸೇವಿಸಿ, ಆ ಮಹಾಪಾಪದಿಂದ ಮುಕ್ತನಾದನು. ಆದುದರಿಂದಲೇ ಈ ಸ್ಥಳಕ್ಕೆ "ಇಂದ್ರಪ್ರಸ್ತಪುರ' ಎಂಬ ಹೆಸರೂ ಬಂದಿತು.

"ಪುತ್ರ ಸಂತಾನವಿಲ್ಲದವರಿಗೆ ಸದ್ಗತಿಯೆಲ್ಲ' ಎಂಬ ವಚನವನ್ನು ಕೇಳಿದ ಧರ್ಮಾತ್ಮನಾದ 'ಪುರುಕುತ್ಸ' ಮಹಾರಾಜ, ಪೈತರ ಮುನಿಗಳ ಆದೇಶದಂತೆ ಇಲ್ಲಿ ತಪಸ್ಸು ಮಾಡಿ ಉತ್ತಮ ಸಂತಾನವನ್ನು ಪಡೆದುದರಿಂದಲೇ, ಈ ಪುಣ್ಯತೀರ್ಥಕ್ಕೆ "ಪುರುಕುತ್ಸಪುರ" ಎಂಬ ಅಂಕಿತವೂ ಉಂಟಾಯಿತು.

ಜಮದಗ್ನಿ ಮಹರ್ಷಿಯು ಸಂತಾನಾಪೇಕ್ಷಿಯಾಗಿ, ಈ ಜನಾರ್ದನನನ್ನು ಸೇವಿಸಿದ ಫಲವಾಗಿ ಪರಶುರಾಮನನ್ನು ಮಗನನ್ನಾಗಿ ಪಡೆದ ಎಂದೂ ಸ್ಥಳಪುರಾಣದಲ್ಲಿ ಉಕ್ತವಾಗಿದೆ

ಶ್ರೀಮನ್ನಾರಾಯಣನಿಗೆ ಕೇಶವಾದಿ ಇಪ್ಪತ್ತನಾಲ್ಕು ನಾಮಗಳು ಪ್ರಸಿದ್ಧವಾಗಿವೆ. ಇವೆಲ್ಲಕ್ಕೂ ಪ್ರತ್ಯೇಕವಾದ ಲಕ್ಷಣವಿದೆ. ಅದರಂತೆ ಜನಾರ್ದನ ದೇವ ಸಾಮಾನ್ಯವಾಗಿ ಶಂಖಚಕ್ರಧಾರಿಯೂ,

ಪೀತಾಂಬರನೂ ಆಗಿರಬೇಕಾಗಿತ್ತು. ಆದರೆ ಇಲ್ಲಿಯ ಜನಾರ್ದನನ ಈ ಅರ್ಚಾಮೂರ್ತಿಗೆ ಇದರ ವಿಪರೀತ ಲಕ್ಷಣಗಳಿವೆ. ಬ್ರಹ್ಮಚಾರಿಯಾಗಿ ವಿಶೇಷವನ್ನು ಸಂಪಾದಿಸಿ ಹಾಗಿದೆ. ಆ ಲಕ್ಷಣಗಳನ್ನೇ ಇಲ್ಲಿ ಕಾಣಬಹುದು. ಮೌಂಜಿ–ಕೌಪೀನಧಾರಿಯಾಗಿ, ಕೈಯಲ್ಲಿ ಚಕ್ರವನ್ನೂ, ದಂಡವನ್ನು ಧರಿಸಿರುವವನು ಈ ಜನಾರ್ದನ.

ಬಿನ್ನ ಬಿನ್ನವಾದ ಐಹಿಕ ಕಾಮನೆಗಳನ್ನು ಬಯಸಿ ಆರಾಧಿಸುವ, ಅಂತೆಯೇ ಮೋಕ್ಷವನ್ನು ಅಪೇಕ್ಷಿಸುವ. ಭಕ್ತರಿಗೆ ಅವರವರ ಇಷ್ಟವನ್ನು ಕರುಣಿಸುವವನು, ಕರುಣ ಮೂರ್ತಿ ಪಾಶ್ಯದ ಜನಾರ್ದನ.

'ಪುರುಕುತ್ಸ' ರಾಜನಿಗೆ ಸಂತಾನವನ್ನು ಕರುಣಿಸಿದಂತೆ ಇಂದಿಗೂ ತನ್ನ ನಿಸ್ಸಂತಾನರಾದ ಭಕ್ತರಿಗೆ ಸಂತಾನವನ್ನು ಕರುಣಿಸಿದ ಹಲವಾರು ಪ್ರತ್ಯಕ್ಷ ಸನ್ನಿವೇಶಗಳಿವೆ ಎನ್ನುವ ನಂಬಿಕೆಯಿದೆ.

ಈ ಜನಾರ್ದನ ಸ್ವಾಮಿಯ ಬಲಗಡೆಯಲ್ಲಿ ಚಕ್ರ ತೀರ್ಥವನ್ನು, ಎಡಭಾಗದಲ್ಲಿ ಶಂಖ ತೀರ್ಥವನ್ನು ಇಂದಿಗೂ ಕಾಣಬಹುದು. ಇದೇ ರೂಪವಾದ ಈ ಎರಡು ತೀರ್ಥಗಳೂ ಸ್ವಾಮಿಯ ಮುಂಭಾಗದಲ್ಲಿ ಸಂಗಮವಾಗಿರುವುದು ಇಲ್ಲಿಯ ಇನ್ನೊಂದು ವೈಶಿಷ್ಟ್ಯತೆ.

ವಿಜಯನಗರದ ಅರಸರು, ಹಾಗೂ ಮಹಾರಾಜರು ದುರ್ಗದ ಪಾಳೆಗಾರ, ಇತ್ಯಾದಿ, ಇತಿಹಾಸ ಪ್ರಸಿದ್ಧರಾದ ವ್ಯಕ್ತಿಗಳು ಈ ಜನಾರ್ದನಸ್ವಾಮಿಯನ್ನು ಬಹುಮುಖವಾಗಿ ಸೇವಿಸಿ ತಮ್ಮ ತಮ್ಮ ಇಷ್ಟಾರ್ಥವನ್ನು ಪಡೆದಿದ್ದರು ಎಂಬುದಕ್ಕೆ ಸಾಕಾದಷ್ಟು ಐತಿಹಾಸಿಕ ದಾಖಲೆಗಳು ಉಪಲಬ್ಧವಿವೆ.

ಹೀಗೆ ಈ ಪಾಶ್ಯಕ್ಷೇತ್ರದ ಜನಾರ್ದನ ಸ್ವಾಮಿ, ತನ್ನದೇ ಆದ ಪೌರಾಣಿಕ ಹಾಗೂ ಐತಿಹಾಸಿಕ ಹಿನ್ನೆಲೆಯನ್ನು ಹೊಂದಿ ಇಂದಿಗೂ ಭಕ್ತರ ಸಕಲೇಷ್ಟಗಳನ್ನು ಸಂಧಿಸಿ ಕೊಡುವ ಅಪೂರ್ವ ದೇವತೆಯಾಗಿದ್ದಾನೆ. ★

# ತಿರುಪತಿ ಯಾತ್ರಿಕರಿಗೆ ಒಂದು ಸದವಕಾಶ

ತಿರುಪತಿಗೆ ಬರುವ ಯಾತ್ರಿಕರು ಶ್ರೀ ವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ತಿರುಪತಿಯ ಇತರ ದೇವಾಲಯಗಳನ್ನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ. ತಿ. ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿದೆ. ಈ ಬಸ್‌ನಲ್ಲಿ ಹೊರಟು ;

**ಶ್ರೀ ಗೋವಿಂದರಾಜಸ್ವಾಮಿ ದೇವಾಲಯ**

**ಶ್ರೀ ಕೋದಂಡರಾಮಸ್ವಾಮಿ ದೇವಾಲಯ**

**ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು**

**ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ**

**ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರ**

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು ( 2 ಗಂಟೆಗಳಲ್ಲಿ )

ಬಸ್ ಹೊರಡುವ ಸ್ಥಳ : ಶ್ರೀ ಗೋವಿಂದರಾಜಸ್ವಾಮಿ ಸತ್ರ ( ತಿರುಪತಿ ರೈಲ್ವೆಸ್ಟೇಷನ್ ದಕ್ಷಿಣ )

ಬಸ್ ಹೊರಡುವ ಕಾಲ : ಬೆಳಗ್ಗೆ 6–00, ಬೆಳಗ್ಗೆ 10–00, ಸಂಜೆ 3–00

ಬಸ್ ಪ್ರಯಾಣದ ದರ ; ಒಂದು ಟಿಕೆಟ್ಟಿಗೆ 18 ರೂ ಮಾತ್ರ. ಕಿರಿಯರಿಗೆ ಅರ್ಧ ಟಿಕೆಟ್;
( ಇದರಲ್ಲಿ ಆಯಾ ದೇಸ್ಥಾನಗಳ ಪ್ರವೇಶದ ದರವೂ ಸೇರಿದೆ. )

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸಲಾಗಿದೆ.

**ತಿ.ತಿ.ದೇ**

# ಶ್ರೀ ವಲ್ಲಭಾಚಾರ್ಯರು

ಭಾರತದ ಭಕ್ತಿ ಪಂಥದಲ್ಲಿ ಶ್ರೀಕೃಷ್ಣಭಕ್ತಿಯೇ ಪ್ರಧಾನವಾಗಿಟ್ಟುಕೊಂಡ ಶ್ರೀವಲ್ಲಭಾಚಾರ್ಯರು ಆಚಾರ್ಯತ್ರಯ (ಶಂಕರ, ಮಧ್ವ, ರಾಮಾನುಜ) ರಷ್ಟೇ ಪ್ರಸಿದ್ಧ ಪುರುಷರು. ಕೃಷ್ಣವಾಚಾರ್ಯರಿಂದ ಪ್ರಭಾವಿತರಾದ ಇವರು ಮಧ್ವಧರ್ಮದ ತಿರುಳಾದ ಶ್ರೀಕೃಷ್ಣಭಕ್ತಿಯ ಪ್ರಸಾರಮಾಡಿದರು. ಬಂಗಾಳದ ಚಂಡಿದಾಸ್, ರಾಜಸ್ಥಾನದ ಮೀರಾಬಾಯಿ, ಉತ್ತರ ಪ್ರದೇಶದ ತುಳಸೀದಾಸ, ಪಂಜಾಬದ ಸೂರದಾಸ, ಗುಜರಾಥದ ನರಸೀಮೆಹತಾ ಇವರೇ ಮೊದಲಾದ ಭಕ್ತಕವಿಗಳು ಶ್ರೀಕೃಷ್ಣ ಭಕ್ತಿಯನ್ನು ಪ್ರಸಾರಮಾಡಿದರು.

ವ್ರಜದೇಶದ ಭಕ್ತಕವಿ ವಲ್ಲಭಾಚಾರ್ಯರು ಗುಜರಾಥದವರು. ಇವರು ಹಾಕಿಕೊಟ್ಟ ಸಂಪ್ರದಾಯಗಳನ್ನು ಇಂದಿಗೂ ಗುಜರಾಥದವರು ಪಾಲಿಸುತ್ತಾರೆ. "ಶ್ರೀಕೃಷ್ಣಃ ಶರಣಂ ಮಮ ದಾಸೋಹಂ ಶ್ರೀಕೃಷ್ಣ ತವಾಸ್ಮಿ" – ಎಂದು ಕೃಷ್ಣಭಕ್ತಿಯನ್ನೇ ಬೀರಿದ ಶ್ರೀ ವಲ್ಲಭಾಚಾರ್ಯರು ಆಂಧ್ರ ಬ್ರಾಹ್ಮಣ ಮನೆತನದಲ್ಲಿ ಕ್ರಿಸ್ತಾಬ್ದ 1479ರಲ್ಲಿ ಜನ್ಮತಾಳಿದರು. ಹದಿನೇಳು ವರ್ಷದವರಿರುವಾಗಲೇ ವೇದ, ವೇದಾಂಗ, ಪುರಾಣ ಸಾಹಿತ್ಯಗಳ ಅಧ್ಯಯನಮಾಡಿ ಅದ್ವಿತೀಯ ಪಂಡಿತರೆನಿಸಿಕೊಂಡರು ಭಕ್ತಿ ಸಾಹಿತ್ಯವನ್ನು ಅಳವಡಿಸಿಕೊಂಡರು. ಶಂಕರಾಚಾರ್ಯರ ಅದ್ವೈತವು ಶುದ್ಧ ಅದ್ವೈತವೆಂದೂ ವೇದವ್ಯಾಸರ ಭಾಗವತದ ಭಾಷೆಯು ಸಮಾಧಿಭಾಷೆಯೆಂದೂ ಸಾರಿದರು. ವಲ್ಲಭಸ್ವಾಮಿಗಳು ವರ್ಚಸ್ವೀ ವಿದ್ವಾಂಸರಷ್ಟೇ ಆಗಿರದೆ, ತತ್ತ್ವವೇತ್ತರೂ, ಶ್ರೇಷ್ಠ ಭಕ್ತರೂ ಆಗಿದ್ದರು. ಬಾಲ್ಯದಲ್ಲಿಯೇ ಶ್ರೀಕೃಷ್ಣಭಕ್ತಿಯನ್ನು ಪ್ರಸಾರಮಾಡಿದ ಇವರು ಶ್ರೀಕೃಷ್ಣಸ್ವಾಮಿಯ ಅನುಯಾಯಿಗಳಾಗಿದ್ದರು. ಇವರು ಸರ್ವಸ್ವವನ್ನು ಶ್ರೀಕೃಷ್ಣನಿಗೆ ಅರ್ಪಿಸುವ ಪ್ರತಿಜ್ಞೆಮಾಡಿ, 'ಸರ್ವಾರ್ಪಣಭಾವ' ದಿಂದ ತಮ್ಮ ಶರೀರ, ಪರಿವಾರ, ಧನಸಂಪತ್ತುಗಳೆಲ್ಲ ಸಮರ್ಪಣಮಾಡಿದರು. ಸರ್ವಸಮರ್ಪಣಭಾವವೇ ಭಕ್ತಿತತ್ತ್ವದ ಅಂತಿಮಗುರಿ. ಜೀವನದುದ್ದಕ್ಕೂ ಭಕ್ತಿಮಾರ್ಗವನ್ನೇ ಪುರಸ್ಕರಿಸಿ ಪುಷ್ಟಿಭಕ್ತಿಮಾರ್ಗದ ಪ್ರವರ್ತಕರಾದರು.

ಶ್ರೀಮದ್ಭಾಗವತದಲ್ಲಿ ಕಂಡುಬರುವ 'ರಾಧಾಕೃಷ್ಣ ಭಾವದಭಕ್ತಿ'ಯು ಪ್ರೇಮಭಕ್ತಿಯಾಗಿದೆ. ಇಲ್ಲಿ ಶೃಂಗಾರದ ಉದ್ರೇಕವು ಕಡಿಮೆಯಾಗಿದ್ದು ಪ್ರೇಮವು ಕಾಮಗಂಧವಿಹೀನವಾಗಿ, ಭಕ್ತಿಯೊಡನೆ ಬೆರೆತಿದೆ. ಗೋಪಿಯರ ಪ್ರೇಮದ ಹೊನಲು ಪ್ರಗಾಢವಾದ ಭಕ್ತಿಯಿಂದ ಮಧುರಭಾವವನ್ನು ತಾಳಿದೆ. ಅನುಪಮವಾದ ಈ ಭಕ್ತಿಗೆ ಗೋಪೀಭಾವವೆಂದು ಕರೆಯುವರು. ಶ್ರೀಕೃಷ್ಣನ ಭಕ್ತಿಯಲ್ಲಿ ತಲ್ಲೀನರಾದ ಖಷಸ್ಪೃಶರಾದ ಗೋಪಿಯರು ತೋರಿದ ಶುದ್ಧರತಿ (ಭಕ್ತಿ) ಭಾವವೇ ಪ್ರೇಷ್ಠಭಕ್ತಿಗೆ ಆಧಾರವು

ರಾಸಲೀಲೆ–ಯಲ್ಲಿ ನಿರೂಪಿಸಿದಂತೆ;

ಪತಿಸುತಾನ್ವಯಭ್ರಾತೃಬಾಂಧವಾನತಿ
ವಿಲಂಘ್ಯ ತೇ ಹ್ಯಚ್ಯುತಾಗತಾಃ

(ಹೇ ಅಚ್ಯುತ, ಪತಿಪುತ್ರಾದಿಗಳ ಸೇವೆಯನ್ನು ಬಿಟ್ಟು ನಿನ್ನಲ್ಲಿಯೇ ಪ್ರೀತಿ (ಭಕ್ತಿ) ಯನ್ನಿಟ್ಟು, ನಿನ್ನನ್ನನುಸರಿಸಿ ಬಂದಿರುವೆವು' ಎಂದು ಗೋಪಿಯರು ಪ್ರಾರ್ಥಿಸಲು, ಪರಮಾತ್ಮನು ಅವರಿಗೆ ಸ್ತ್ರೀಧರ್ಮ ನೀತಿಯನ್ನು ಉಪದೇಶಿಸಿದನು. ಪತಿಪುತ್ರಾದಿಗಳ ಸೇವೆಮಾಡುವುದೇ, ಸ್ತ್ರೀಧರ್ಮ' ವೆಂದು ಸಾರಿದನು. ಅದಕ್ಕೆ ಉತ್ತರರೂಪವಾಗಿ ಗೋಪಿಯರು,

"ಪ್ರೇಷ್ಠೋ ಭವಾನ್ ತನುಭೃತಾಂ
ಕಿಲ ಬಂಧು ರಾತ್ಮಾ"

ದೇಹಧಾರಿಗಳಿಗೆ ನೀನು(ಕೃಷ್ಣನು) ನಿಜವಾಗಿಯೂ ಪ್ರಿಯತಮನು; ನಮಗೆ ನೀನೇ ಬಂಧು, ನೀನೇ ಆತ್ಮನು. ಆದಕ್ಕಾಗಿ ನಿನ್ನ ಸೇವೆ ಮಾಡುವುದು ನಮ್ಮ ಹಾಗೂ ಪ್ರತಿಯೊಂದು ಜೀವಿಯ ಕರ್ತವ್ಯವಾಗಿರುವುದು. ಪತಿಪುತ್ರರ ಸೇವೆ ಮಾಡುವುದು ಕೇವಲ ಶರೀರ ಸಂಬಂಧದ ಸ್ವಧರ್ಮವಾಗಿರುವುದು. ನಿಜವಾದ ಭಕ್ತರು, ಸರ್ವರ ಆತ್ಮನಾದ ಭಗವಂತನಲ್ಲಿಯೆ ಭಕ್ತಿಮಾಡುವರು. ಭಕ್ತನೇ ಸರ್ವಸ್ವನಾದ ಭಗವಂತನು ಅವರಿಗೆ ಪ್ರಿಯತಮ. (ಪ್ರೇಷ್ಠನು) ಯಾವುದು ಪ್ರಿಯವೋ ಅದರ ಸೇವೆ ಮಾಡುವುದು ಶ್ರೇಷ್ಠವು ಸರ್ವದೋಷರಹಿತನಾದ, ಶ್ರೇಷ್ಠ ದೈವತವಾದ ಶ್ರೀಕೃಷ್ಣನನ್ನು ಗೋಪಿಯರು ಸರ್ವಸಮರ್ಪಣ ಭಾವದಿಂದ ಮೊರೆಹೊಕ್ಕರು. ಇದೇ ಗೋಪೀಭಕ್ತಿಯ ತಿರುಳು, ಶ್ರೇಷ್ಠ ಭಕ್ತಿಯ ಪ್ರಚೋದನೆ.

"ಕೃಷ್ಣಾತ್ಪರಂ ನಾಸ್ತಿ ವಸ್ತುತೋ ದೋಷವರ್ಜಿತಂ" ಎಂದು ಭಕ್ತಿಶಾಸ್ತ್ರದಲ್ಲಿ ನಿರ್ಣೀತವಾದಂತೆ ಶ್ರೀಕೃಷ್ಣನೇ ಪರಮದೈವತನು; ಆತನು ದೋಷರಹಿತನು, ಆತನಲ್ಲಿ ತೋರುವ ಭಕ್ತಿಯೆ ಶ್ರೇಷ್ಠ ಭಕ್ತಿಯು. ಈ ತತ್ತ್ವವನ್ನನುಸರಿಯೇ ಶ್ರೀ ವಲ್ಲಭಾಚಾರ್ಯರು ಪುಷ್ಟಿಭಕ್ತಿ ಮಾರ್ಗವನ್ನು ಬಳಕೆಯಲ್ಲಿ ತಂದು ಪ್ರಸಾರಮಾಡಿದರು.

'ನಿರತಿಶಯವಾದ ಸ್ನೇಹವೇ ಭಕ್ತಿ' ಯೆಂದು ಹೇಳಿರುವರು. ಪುಷ್ಟಿಭಕ್ತಿಯಲ್ಲಿ ಸದೃಢವಾದ ಸ್ನೇಹವೇ ಪ್ರಧಾನವಾಗಿದೆ. ಆನಂದಾತ್ಮಕ, ರಸಾತ್ಮಕ ಭಾವಗಳಿಂದ ಕೂಡಿದಭಕ್ತಿಯು ಪುಷ್ಟಿಮಾರ್ಗ. ಇದರಲ್ಲಿ ಜೀವಾತ್ಮವು ಒಂದಂಶ; ಪರಮಾತ್ಮನು ಪೂರ್ಣಾಂಶ. ಭಗವಂತನು ಭಕ್ತರಿಗಾಗಿ ಬಾಲಭಾವ, ಪುತ್ರಭಾವ, ಸಖೀಭಾವಗಳನ್ನು ತಾಳಿ, ಅವರನ್ನು ಅನುಗ್ರಹಿಸುವನು. ಪರಮಾತ್ಮನ ವಿಶೇಷ ಅನುಗ್ರಹವುಳ್ಳ ಈ ಮಾರ್ಗಕ್ಕೆ 'ಅನುಗ್ರಹಮಾರ್ಗ' ವೆಂತಲೂ ಕರೆಯುವರು. ಶ್ರೀಮದ್ಭಾಗವತದಲ್ಲಿ ಬರುವ ಶ್ರೀಕೃಷ್ಣಜನನ, ಬಾಲಲೀಲೆಗಳು, ಈ ಭಕ್ತಿಮಾರ್ಗದ ದೃಷ್ಟಾಂತಗಳಾಗಿವೆ ವಸುದೇವದೇವಕಿ; ನಂದಯಶೋದೆ, ಗೋಪಗೋಪಿಕೆಯರು, ಹಾಗೂ 'ಗೋಕುಲ'ದ ಮೇಲೆ ಬಾಲಕೃಷ್ಣನು ಅನುಗ್ರಹ ಬೀರಿದ್ದಾನೆ. ಆತನೇ ಶ್ರೀಮದ್ಭಗವದ್ಗೀತೆಯಲ್ಲಿ "ಸರ್ವಧರ್ಮಾನ್ ಪರಿತ್ಯಜ್ಯ, ಮಾಮೇಕಂ ಶರಣಂ ವ್ರಜ" ಎಂದು ಅರ್ಜುನನ ಮುಖಾಂತರ ಭಕ್ತರಿಗೆ ಉಪದೇಶನೀಡಿದ್ದಾನೆ.

ಭಕ್ತಿಮಾರ್ಗದಲ್ಲಿ 'ಶರಣಾಗತಿ'ಯು ಪ್ರಧಾನವಾದ ಅಂಶ. ಪುಷ್ಟಿಮಾರ್ಗದ ಭಕ್ತನು ಸರ್ವಾತ್ಮಭಾವದಿಂದ ಪ್ರಭುಪರಮಾತ್ಮನಿಗೆ ಶರಣು ಹೋಗುವನು. ಶರಣು ಹೋಗುವುದರಿಂದ ಮಾನಸಿಕ ಸೇವೆ ಸಿದ್ಧವಾಗುವುದು; ಪರಾತ್ಮಕ, ಸೇವಾತ್ಮಕ ಭಾವಗಳು ಉದಯವಾಗುವವು. 'ವಾಸುದೇವಃ ಸರ್ವಂ ಇತಿ' (ಸಕಲವೂ ವಾಸುದೇವನು) ಎಂಬ ದೃಷ್ಟಿಯಿಂದ ಪರಮಾತ್ಮನ ಲೀಲೆಗಳನ್ನು ಕಂಡು ಆನಂದಿತನಾಗುವನು. 'ರಸೋ ವೈ ಸಃ' ಎನ್ನುವಂತೆ ರಸರೂಪನಾದ, ರಸನಿಧಿ ಸ್ವರೂಪನಾದ ಶ್ರೀಕೃಷ್ಣ ಪರಮಾತ್ಮನನ್ನು ಕಂಡು ನಿತ್ಯಾನಂದನಾಗುವನು. ಮಧುರಭಾವದಿಂದ ಪ್ರಭುವಿನ ಪ್ರಸನ್ನತೆ ಪಡೆಯುವನು. ಶ್ರೀಕೃಷ್ಣನ ವೇಣುನಾದದ ಕೃಪೆಯಿಂದ ವಿಶ್ವವೆಲ್ಲವೂ ಆನಂದರಸದಲ್ಲಿ ಓಲಾಡಿದಂತೆ ಈ ಭಕ್ತಿಮಾರ್ಗದ ಸಾಧಕನು ಸದಾ ಆನಂದ ಪಡೆಯುವನು.

(20 ನೇ ಪುಟ ನೋಡಿ)

ವಿದ್ವಾನ್ ಭೀಮಾಚಾರ್ಯ ಗುಡಿ

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ

## ನಿತ್ಯಪೂಜೆ, ದರ್ಶನಾದಿಗಳ ಕಾರ್ಯಕ್ರಮ,

### ಶನಿ, ಭಾನು, ಸೋಮ ಮತ್ತು ಮಂಗಳವಾರಗಳಲ್ಲಿ

ಮಂಗಳವಾರ ಅಷ್ಟದಳಪಾದ ಪದ್ಮಾರಾಧನೆ

ಉದಯ 3–00 ರಿಂದ 3–30 ಸುಪ್ರಭಾತ
(50/- ರೂ ಟಿಕೆಟ್ ಹೊಂದಿದವರಿಗೆ ಮಾತ್ರ ಪ್ರವೇಶ)

,, 3–30 ರಿಂದ 3–45 ವರೆಗೆ ಶುದಿ

,, 3–45 ರಿಂದ 4–30 ವರೆಗೆ ತೋಮಾಲಸೇವೆ
(ರೂ 100/- ಟಿಕೆಟ್)

,, 4–30 ರಿಂದ 4–45 ವರೆಗೆ ಓಲಗ ಮತ್ತು
ಪಂಚಾಂಗ ಶ್ರವಣ

,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
(ರೂ 100/– ಟಿಕೆಟ್) (ಏಕಾಂತ)

,, 5–30 ರಿಂದ 6–00 ವರೆಗೆ ಮೊದಲನೆಯ ಗಂಟೆ
ಬಲಿ ಮತ್ತು ಶಾತ್ತುಮೊರೆ

,, 6–00 ರಿಂದ 11–00 ವರೆಗೆ ಸರ್ವದರ್ಶನ

ಮಧ್ಯಾಹ್ನ 11–00 ರಿಂದ 12–00 ವರೆಗೆ ಶುದ್ಧಿ, ಎರಡನೇ ಅರ್ಚನೆ,
(ಏಕಾಂತ)

(ಮಂಗಳವಾರಗಳಲ್ಲಿ ಮಧ್ಯಾಹ್ನ 11–15 ರಿಂದ 11–45 ವರೆಗೆ
ಅಷ್ಟದಳಪಾದ ಪದ್ಮಾರಾಧನೆ ನಡೆಯುವುದು.)

,, 12–00 ರಿಂದ 7–00 ವರೆಗೆ ಸರ್ವದರ್ಶನ

ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ, ರಾತ್ರಿ ಕೈಂಕರ್ಯ

,, 8–00 ರಿಂದ 10–00 ವರೆಗೆ ಸರ್ವದರ್ಶನ

,, 10–00 ರಿಂದ 10–30 ವರೆಗೆ ಶುದ್ಧಿ

10–30 ಏಕಾಂತಸೇವೆ (ರೂ 50/– ಟಿಕೆಟ್)

### ಗುರುವಾರ, ತಿರುಪ್ಪಾವಡ

ಉದಯ 3–00 ರಿಂದ 3–30 ಸುಪ್ರಭಾತ (ಏಕಾಂತ)
(ರೂ 50/– ಟಿಕೆಟ್ ಹೊಂದಿದವರಿಗೆ ಮಾತ್ರ ಪ್ರವೇಶ.)

,, 3–30 ರಿಂದ 3–45 ವರೆಗೆ ಶುದ್ಧಿ

,, 3–45 ರಿಂದ 4–30 ವರೆಗೆ ತೋಮಾಲಸೇವೆ
(ಟಿಕೆಟ್ ರೂ 100/–)

,, 4–30 ರಿಂದ 4–45 ವರೆಗೆ ಓಲಗ ಮತ್ತು
ಪಂಚಾಂಗ ಶ್ರವಣ

,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
(ಟಿಕೆಟ್ ರೂ 100/–)

,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ
ಶಾತ್ತುಮೊರೆ

,, 6–00 ರಿಂದ 8–00 ವರೆಗೆ ಸಳ್ಳಿಂಪು, 2 ನೇ ಅರ್ಚನೆ
(ಏಕಾಂತ), ತಿರುಪ್ಪಾವಡ ಅಲಂಕರಣ, ಗಂಟೆ ಇತ್ಯಾದಿ

,, 8–00 ರಿಂದ ಸಂಜೆ 6–00 ವರೆಗೆ ಸರ್ವದರ್ಶನ

ಸಂಜೆ 6–00 ರಿಂದ 8–00 ವರೆಗೆ ಶುದಿ ಇತ್ಯಾದಿ

ರಾತ್ರಿ 8–00 ರಿಂದ 10–00 ವರೆಗೆ ಪೂಲಂಗಿ ಸರ್ವದರ್ಶನ

,, 10–00 ರಿಂದ 10–30 ವರೆಗೆ ಶುದ್ಧಿ

10–30 ರಿಂದ ಏಕಾಂತಸೇವೆ (ಟಿಕೆಟ್ ರೂ 50/–)

### ಬುಧವಾರ, ಸಹಸ್ರ ಕಲಶಾಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (ಏಕಾಂತ)
(50 ರೂ ಟಿಕೆಟ್ ಪಡೆದವರಿಗೆ ಮಾತ್ರ ಪ್ರವೇಶ)

,, 3–30 ರಿಂದ 3–45 ವರೆಗೆ ಶುದಿ

,, 3–45 ರಿಂದ 4–30 ವರೆಗೆ ತೋಮಾಲಸೇವೆ
(ಟಿಕೆಟ್ ರೂ 100/-)

,, 4–30 ರಿಂದ 4–45 ವರೆಗೆ ಓಲಗ, ಪಂಚಾಂಗಶ್ರವಣ

,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
(ಟಿಕೆಟ್ ರೂ 100/-)

,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ,
ಶಾತ್ತುಮೊರೆ

,, 6–00 ರಿಂದ 8–00 ವರೆಗೆ ಸಹಸ್ರ ಕಲಶಾಭಿಷೇಕ
(ಆರ್ಜಿತ) ಶುದ್ಧಿ, 2ನೇ ಅರ್ಚನೆ.

,, 8–00 ರಿಂದ ರಾತ್ರಿ 7–00 ವರೆಗೆ ಸರ್ವದರ್ಶನ

ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ

,, 8–00 ರಿಂದ 10–00 ವರೆಗೆ ಸರ್ವದರ್ಶನ

,, 10–00 ರಿಂದ 10–30 ವರೆಗೆ ಶುದ್ಧಿ

10–30 ರಿಂದ ಏಕಾಂತಸೇವೆ
(ಟಿಕೆಟ್ ರೂ 50/–)

### ಶುಕ್ರವಾರ, ಅಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (ಏಕಾಂತ)
(50/– ರೂ ಟಿಕೆಟ್ ಹೊಂದಿದವರಿಗೆ ಮಾತ್ರ ಪ್ರವೇಶ.)

,, 3–30 ರಿಂದ 4–30 ವರೆಗೆ ಸಳ್ಳಿಂಪು ಶುದ್ಧಿ, ಮತ್ತು
ನಿತ್ಯಕೈಂಕರ್ಯಗಳು

,, 4–30 ರಿಂದ 6–00 ವರೆಗೆ ಅಭಿಷೇಕ (ಆರ್ಜಿತ)

,, 6–00 ರಿಂದ 7–00 ವರೆಗೆ ಸಮರ್ಪಣೆ

,, 7–00 ರಿಂದ 8–00 ವರೆಗೆ ತೋಮಾಲಸೇವೆ ಮತ್ತು
ಅರ್ಚನೆ (ಟಿಕೆಟ್ ರೂ 200/-)

,, 8–00 ರಿಂದ 9–00 ವರೆಗೆ ಗಂಟೆ ಬಲಿ, ಶಾತ್ತುಮೊರೆ

,, 9–00 ರಿಂದ ರಾತ್ರಿ 8–30 ವರೆಗೆ ಸರ್ವದರ್ಶನ

(ಸಂಜೆ 7–00 ರಿಂದ 8–30 ವರೆಗೆ ಸಹಸ್ರ ದೀಪಾಲಂಕಾರ ಸೇವೆ)

ರಾತ್ರಿ 8–30 ರಿಂದ 9–30 ವರೆಗೆ ಶುದ್ಧಿ ಇತ್ಯಾದಿ

,, 9–30 ರಿಂದ 10–00 ವರೆಗೆ ಸರ್ವದರ್ಶನ

,, 10–00 ರಿಂದ 10–30 ವರೆಗೆ ಶುದ್ಧಿ

10–30 ಏಕಾಂತಸೇವೆ
(ಟಿಕೆಟ್ ರೂ 50/–)

---

ಗಮನಿಕೆ :– ಕಲ್ಯಾಣೋತ್ಸವ, ಆರ್ಜಿತ ಬ್ರಹ್ಮೋತ್ಸವ, ಉಯ್ಯಾಲೆಸೇವೆ, ವಾಹನ ಸೇವೆಗಳು, ವಸಂತೋತ್ಸವ ಮಧ್ಯಾಹ್ನ 1–00 ರಿಂದ 5–00 ನಡುವೆ ನಡೆಯುತ್ತವೆ.

ರಾತ್ರಿಯ ಹೊತ್ತು ಸರ್ವದರ್ಶನದ ವೇಳೆ ಭಕ್ತಯಾತ್ರಿಕರ ಸಾಂದ್ರತೆಯ ಅನುಕೂಲಕ್ಕೆ ತಕ್ಕಂತೆ ರಾತ್ರಿ ಹತ್ತು ಗಂಟೆಯ ನಂತರವೂ ಮುಂದು ವರೆಯುವುದು.

ಧಾರಾವಾಹಿ

# ಭಾರತೀಯ ಪರಮಾರ್ಥ

## ಪ್ರಪಂಚ ಸೃಷ್ಟಿ

ಬ್ರಹ್ಮಜ್ಞಾನವನ್ನು ಪಡೆಯಬೇಕೆಂದಿರುವವರು ಪ್ರಪಂಚ ಸೃಷ್ಟಿಯ ವಿಚಾರವನ್ನು ಅರಿಯುವೇಕೆ? ಎಂದು ಪ್ರಶ್ನಿಸಬಹುದು "ಬ್ರಹ್ಮವಿತ್ ಬ್ರಹ್ಮೈವಭವತಿ" ಎಂದು ಹಿಂದೆಯೇ ಹೇಳಿದಂತೆ ಬ್ರಹ್ಮವನ್ನು ಅರಿಯಲು ಪ್ರಯತ್ನಿಸುವವರು ಅವನ ಶರೀರಗಳಾದ ಜೀವಾತ್ಮರು ಪ್ರಕೃತಿ ಇವುಗಳ ವಿಷಯವನ್ನು ಅರಿಯದೆ ಬ್ರಹ್ಮವನ್ನು ಅರಿಯಲಾರರು. ಚೇತನನಾದ ತಾನೇ ಆ ಜೀವಾತ್ಮರುಗಳಲ್ಲಿ ಒಬ್ಬನಾಗಿರುವನು; ಮತ್ತು ತನ್ನ ಶರೀರವೇ ಪ್ರಕೃತಿಯ ಅಂಶ. ಇವುಗಳನ್ನು ಅರಿತರೆ ತನ್ನನ್ನೂ ಅರಿತಂತಾಗುವುದರಿಂದ ಸೃಷ್ಟಿಯ ವಿಷಯ ಅರಿಯಲ್ಪಡಬೇಕಾದದ್ದೇ.

ಈಗಿನ ವಿಜ್ಞಾನಶಾಸ್ತ್ರಜ್ಞರು ತಮ್ಮ ಸಂಶೋಧನೆಯಿಂದ ನಮ್ಮ ಸೂರ್ಯನು ಅನೇಕ ಲಕ್ಷವರ್ಷಗಳ ಹಿಂದೆ ಇನ್ನೂ ದೊಡ್ಡದಾಗಿದ್ದು ಉರಿಯುತ್ತಿರುವ ಗೋಳವಾಗಿತ್ತೆಂದೂ, ಅದು ತನ್ನ ಸುತ್ತಲೂ ವೇಗದಿಂದ ಸುತ್ತುತ್ತಿದ್ದಾಗ ಅದರಿಂದ ಉರಿಯುತ್ತಿದ್ದ ಸ್ವಲ್ಪ ಸ್ವಲ್ಪ ಭಾಗಗಳು ಸೂರ್ಯನಿಂದ ಸಿಡಿದು ಹೊರಬಂದುವೆಂದೂ ಅವೇ ಭೂಮಿ, ಬುಧ ಇತ್ಯಾದಿ ಗ್ರಹಗಳೆಂದೂ ಕಾಲಾನ್ತರದಲ್ಲಿ ನಮ್ಮ ಭೂಮಿಯ ಮೇಲ್ಭಾಗದ ಉರಿ ನಿಂತು ತಣ್ಣಗಾಯಿತೆಂದೂ, ಹಾಗೆ ತಣ್ಣಗಾದಮೇಲೆ ಆ ಭೂಮಿಯ ಮೇಲೆ ಜೀವರಾಶಿಗಳು ಹುಟ್ಟಿದುವೆಂದೂ ಹೇಳುವರು. ಈ ಸೂರ್ಯನು ಕೂಡ ಮುಂದೆ ಅನೇಕ ಲಕ್ಷ ವರ್ಷಗಳಲ್ಲಿ ಸ್ವಲ್ಪ ಸ್ವಲ್ಪವಾಗಿ ತನ್ನ ಉಷ್ಣವನ್ನು ಕಳೆದುಕೊಂಡು ತಣ್ಣಗಾಗಬಹುದೆಂದೂ ಊಹಿಸುವರು.

ಈ ಊಹೆಗಳಿಗೆ ಆಧಾರವಿಲ್ಲ; ಬರೀ ಊಹೆಗಳೇ. ಇಂಥಾ ಊಹೆಗಳನ್ನು ವಿವಿಧವಾಗಿ ಅವರವರಿಗೆ ತೋರಿದಂತೆ ಹೇಳಬಹುದು. ಸೂರ್ಯನು ಎಲ್ಲಿಂದಬಂದನು? ಅವನಲ್ಲಿ ಮೊದಲು ಅಷ್ಟೊಂದು ಉಷ್ಣ ಎಲ್ಲಿಂದ ಬಂತು? ಅವನು ಯಾತಕ್ಕೆ ವೇಗವಾಗಿ ಸುತ್ತುತಿರುವನು? ಅವನಿಂದ ಸಿಡಿದು ಬಂದು ತಣ್ಣಗಾದ ಈ ಭೂಮಿಯ ಮೇಲೆ ಯಾತಕ್ಕೆ ಮತ್ತು ಹೇಗೆ ಜೀವರಾಶಿಗಳುಂಟಾದವು? ಚಂದ್ರನ ಮೇಲೆ ಯಾತಕ್ಕೆ ಜೀವರಾಶಿಗಳು ಹುಟ್ಟಲಿಲ್ಲ? ಇದರಂತೆ ಅನೇಕ ಕೋಟಿ ಸಂಖ್ಯೆಯಿಂದ ನಕ್ಷತ್ರ ರೂಪದಲ್ಲಿರುವ ಇತರ ಸೂರ್ಯರುಗಳ ವಿಷಯವೇನು? ಇವೆಲ್ಲವನ್ನೂ ಮಾನವನಿಂದ ಕಂಡುಕೊಳ್ಳಲಾದೀತೇ? ಎಂಬ ದೊಡ್ಡ ಪ್ರಶ್ನೆ ಯೊಂದು ನಿಲ್ಲುವುದು. ಮಾನವನಿಂದ ಇದೆಲ್ಲವನ್ನೂ ಅರಿಯುವುದು ಸಾಧ್ಯವಾಗದ ಕಾರ್ಯವೆಂದು ಊಹಿಸಬಹುದು.

ಭಾರತೀಯರ ಭಾಗ್ಯವೋ ಎಂಬಂತೆ ನಮ್ಮ ಹಿಂದಿನ ಕಾಲದ ಮಹರ್ಷಿಗಳು ತಮ್ಮ ಅನೇಕ ಸಹಸ್ರ ವರ್ಷಗಳ ತಪಸ್ಸಿನ ಫಲವಾಗಿ ಭಗವಂತನಿಂದ ಜರುಗುವ ಸೃಷ್ಟಿಯ ಮೂಲವನ್ನು ಅರಿತು ನಮಗೆ ಶಾಸ್ತ್ರಗಳ ಮೂಲಕ ಅನೇಕ ವಿಷಯಗಳನ್ನು ತಿಳಿಯಪಡಿಸಿರುವರು. ಬಹಳ ಸಂಗ್ರಹವಾಗಿ ಆ ವಿಷಯವು ಇಲ್ಲಿ ವಿವರಿಸಲ್ಪಡುವುದು.

ಸೃಷ್ಟಿಕಾಲದಲ್ಲಿ ಪರಬ್ರಹ್ಮನ ಶರೀರವಾಗಿ ಸ್ಥೂಲರೂಪದಿಂದ ತೋರುವ ಜಗತ್ತು ಪ್ರಳಯ ಕಾಲದಲ್ಲಿ ತನ್ನ ಸ್ಥೂಲರೂಪವನ್ನು ಕಳೆದುಕೊಂಡು ಸೂಕ್ಷ್ಮರೂಪದಲ್ಲಿ ಪರಮಾತ್ಮನ ಶರೀರವಾಗಿ ಅವನಲ್ಲಿ ಸೇರಿಕೊಂಡಿರುವುದು ಎಂದು ಹಿಂದೆಯೇ ಹೇಳಿದೆವು. ಸೂಕ್ಷ್ಮರೂಪದಲ್ಲಿರುವ ಪ್ರಕೃತಿಯು ಹೇಗೆ ಜಗತ್ತಾಗಿ ಪರಿಣಮಿಸುವುದೆಂಬ ಕ್ರಮವನ್ನು ಶಾಸ್ತ್ರಗಳು ಈ ರೀತಿಯಾಗಿ ಹೇಳುವುವು.

ಪ್ರಳಯಕಾಲದಲ್ಲಿ ಪ್ರಕೃತಿಯು ಅವಿಭಕ್ತ ತಮಸ್ಸೆಂದು ಕರೆಯಲ್ಪಟ್ಟು ಪರಮಾತ್ಮನಲ್ಲಿ ಲೀನವಾಗಿರುವುದು. ಸೃಷ್ಟಿಕಾಲದಲ್ಲಿ ಪರಮಾತ್ಮನ ಸಂಕಲ್ಪದಿಂದ ಈ ಅವಿಭಕ್ತ ತಮಸ್ಸು ಅಕ್ಷರ ಎಂಬ ಹೆಸರಿನ ತತ್ತ್ವವಾಗಿ ಮಾರ್ಪಟ್ಟು ಅನಂತರ ಪ್ರಪಂಚ ಸೃಷ್ಟಿಗೆ ಅನುಕೂಲವಾದ ಮೂಲ ಪ್ರಕೃತಿಯೆಂಬ ಹೆಸರಿನಿಂದ ಒಂದು ವ್ಯತ್ಯಾಸವನ್ನು ಪಡೆಯುವುದು. ಈ ಮೂಲಪ್ರಕೃತಿಯೇ ಪ್ರಪಂಚ ಸೃಷ್ಟಿಗೆ ಆವಶ್ಯಕವಾದ ಅಚಿತ್ತತ್ತ್ವವು. ಈ ಮೂಲಪ್ರಕೃತಿಯಲ್ಲಿ ಪ್ರಕೃತಿ ಗುಣಗಳಾದ ಸತ್ವ ರಜಸ್ತಮೋಗುಣಗಳು ಹೊರಗೆ ಪ್ರಕಾಶಿಸದಂತೆ ಒಳಗೇ ಅಡಗಿರುವುವು.

ಪರಮಾತ್ಮನ ಸಂಕಲ್ಪ ಶಕ್ತಿಯಿಂದ ಈ ಮೂಲ ಪ್ರಕೃತಿಯು ಮುಂದೆ 'ಮಹತ್' ಎಂದು ಕರೆಯಿಸಿಕೊಳ್ಳುವ ಮತ್ತೊಂದು ತತ್ತ್ವವಾಗಿ ಮಾರ್ಪಾಡಾಗುವುದು. "ಮಹಾನ್ ಬುದ್ಧಿಲಕ್ಷಣಂ" ಎಂಬ ಶಾಸ್ತ್ರವಾಕ್ಯರೀತ್ಯಾ ಪ್ರಪಂಚದಲ್ಲಿರುವ ಜೀವಕೋಟಿಗಳ ಬುದ್ಧಿಶಕ್ತಿಯು ಈ ಮಹತ್ತತ್ತ್ವದಿಂದ ಉಂಟಾಗುವುದು.

ಈ ಮಹತ್ತು ಮುಂದೆ 'ಅಹಂಕಾರ' ವೆಂಬ ಮತ್ತೊಂದು ತತ್ತ್ವವಾಗಿ ಪರಿಣಮಿಸುವುದು. ಈ ಅಹಂಕಾರ ತತ್ತ್ವದಲ್ಲಿ ಜೀವಕೋಟಿಗಳ ಅಹಂಭಾವನೆಗೆ ಮೂಲಕಾರಣವಾದ (Egoism) ಗುಣ ವಿರುವುದು. ಈ ಅಹಂಕಾರವು ಮುಂದೆ ಸಾತ್ತ್ವಿಕ, ರಾಜಸ, ತಾಮಸ ಎಂದುಮೂರಾಗಿ ಪರಿಣಮಿಸುವುದು. ಸಾತ್ತ್ವಿಕಾಹಂಕಾರ ತತ್ತ್ವದಲ್ಲಿ ಸಾತ್ತ್ವಿಕ ಗುಣವೂ, ರಾಜಸಾಹಂಕಾರ ತತ್ತ್ವದಲ್ಲಿ ರಾಜಸ ಗುಣವೂ, ತಾಮಸಾಹಂಕಾರ ತತ್ತ್ವದಲ್ಲಿ ತಾಮಸಗುಣವೂ ತುಂಬಿರುವುವು. ಈ ಗುಣಗಳ ವಿಷಯವು ಮುಂದೆ ವಿವರಿಸಲ್ಪಡುವುದು; ಈಗ ಈ ಮೂರು ತತ್ತ್ವಗಳ ಪರಿಣಾಮಗಳನ್ನು ಮಾತ್ರ ಮುಂದುವರಿಸುವೆವು. ಈ ತಮಸ್ಸು, ಮೂಲಪ್ರಕೃತಿ, ಮಹತ್, ಅಹಂಕಾರ–ಇವೆಲ್ಲಾ ಸೂಕ್ಷ್ಮರೂಪದಲ್ಲೇ ಇರುವುವು ಕಣ್ಣಿಗೆ ಕಾಣಿಸುವುದಿಲ್ಲ.

ಸಾತ್ತ್ವಿಕಾಹಂಕಾರದಿಂದ ತ್ವಕ್, ಚಕ್ಷು, ಶ್ರೋತ್ರ, ಜಿಹ್ವಾ, ಘ್ರಾಣ (*Sense organs of Touch, Sight, Hearing, Taste and Smell*) ಎಂಬ ಐದು ಜ್ಞಾನೇಂದ್ರಿಯಗಳೂ; ವಾಕ್, ಪಾಣಿ, ಪಾದ, ಪಾಯು, ಉಪಸ್ಥ ಎಂಬ ಐದು ಕರ್ಮೇಂದ್ರಿಯಗಳೂ ಮತ್ತು

ಶ್ರೀ ಎಂ.ಓ. ಎಸ್. ಅಯ್ಯಂಗಾರ್

# ಶ್ರೀ ವೇಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ | |
|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ ಪ್ರಾ 7–30 | ಪ್ರಾ 8–30 |
| | | | ಸಮರ್ಪಣ ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | ಪ್ರಾ 9–30 | ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | ರಾ 8–45 | ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 200=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ (ಒಂದು ವರ್ಷಕ್ಕೆ) | ರೂ – 42=00 |
| ಶಾಶ್ವತ ನಿತ್ಯಾರ್ಚನೆ | ರೂ – 542=00 |

ಮನಸ್ಸು ಎಂಬ ಹನ್ನೊಂದನೆ ಇಂದ್ರಿಯವೂ ಹುಟ್ಟುವುವು.

ಈ ಪತ್ತು ಇಂದ್ರಿಯಗಳೂ ಅಣುಸ್ವರೂಪದಲ್ಲಿ ಸೂಕ್ಷ್ಮರೂಪದಿಂದಿದ್ದು ( *Subtle atomic form*) ಆಯಾ ಇಂದ್ರಿಯಗಳಶಕ್ತಿಗಳೊಡನೆ ಕೂಡಿದ್ದು ಆಯಾ ಸ್ಥೂಲ ಇಂದ್ರಿಯಗಳ(*Gross Organs*) ಸಮೀಪದಲ್ಲಿದ್ದು ಅವುಗಳ ಕಾರ್ಯವನ್ನು ಮಾಡುವುವು. ಶ್ರೋತ್ರೇಂದ್ರಿಯವು ಕಿವಿಗಳ ಮೂಲಕ ಶಬ್ದವನ್ನು ಗ್ರಹಿಸುವುದು, ಚಕ್ಷುರಿಂದ್ರಿಯವು ಕಣ್ಣುಗಳಮೂಲಕ ರೂಪವನ್ನು ಗ್ರಹಿಸುವುದು. ರಸನೇಂದ್ರಿಯವು ನಾಲಿಗೆಯ ಮೂಲಕ ರುಚಿಯನ್ನು ಗ್ರಹಿಸುವುದು. ಘ್ರಾಣೇಂದ್ರಿಯವು ಮೂಗಿನ ಮೂಲಕ ವಾಸನೆಯನ್ನು ಗ್ರಹಿಸುವುದು. ಹೀಗೆಯೇ ಐದು ಕರ್ಮೇಂದ್ರಿಯಗಳ ಕಾರ್ಯವನ್ನೂ ಅರಿಯಬೇಕು. ಹನ್ನೊಂದನೆ ಇಂದ್ರಿಯವಾದ ಮನಸ್ಸು ಹೃದಯದಲ್ಲಿದ್ದು, ಇಂದ್ರಿಯಗಳಿಗೆಲ್ಲಾ ರಾಜನೆನಿಸಿಕೊಂಡು, ಅವುಗಳಿಂದ ಕಾರ್ಯ ಮಾಡಿಸಿಕೊಳ್ಳುವುದು.

ಶರೀರದಲ್ಲಿರುವ ನರಗಳಲ್ಲಿ ( *Nervous System*) ಎರಡುವಿಧ. ಕೆಲವು ಜ್ಞಾನಶಕ್ತಿಯುಳ್ಳವುಗಳು (*Sensory Nerves*) ಮತ್ತು ಕೆಲವು ಕ್ರಿಯಾಶಕ್ತಿಯುಳ್ಳವು (*Motor Nerves*), ಜ್ಞಾನೇಂದ್ರಿಯಗಳು ಐದೂ ಆಯಾ ಸ್ಥೂಲ ಇಂದ್ರಿಯಗಳ ಸಂಪರ್ಕದಲ್ಲಿದ್ದು ಜ್ಞಾನ ನರಗಳಲ್ಲಿ (*Sensory nerve centres*) ಸ್ಥಾಪಿತವಾಗಿದ್ದು ಹೊರಗಿನ ವಿಷಯಗಳನ್ನು ಗ್ರಹಿಸಿ ಮನಸ್ಸಿಗೆ ತಲುಪಿಸುತ್ತವೆ ಮನಸ್ಸು ಕ್ರಿಯಾಶಕ್ತಿಯುಳ್ಳನರಗಳಲ್ಲಿ (*Motar nerves*)ಆಯಾಸ್ಥೂಲ ಇಂದ್ರಿಯಗಳ ಸಂಪರ್ಕದಿಂದಿರುವ ಕರ್ಮೇಂದ್ರಿಯಗಳಿಂದ ಕಾರ್ಯಮಾಡಿಸುವುದು. ಈ ಮನಸ್ಸು ಮನುಷ್ಯರ ಹೃದಯದಲ್ಲಿದ್ದು ಈ ನರಗಳಿಗೆಲ್ಲಾ (*Nerves System*)ಮೂಲ ಸ್ಥಾನವಾದ ತಲೆಯ ಮೆದುಳಿನ (*Brain*) ಮೂಲಕಕಾರ್ಯಮಾಡುತ್ತದೆ. ಈ ಮೆದುಳೇ ಮನಸ್ಸಿನ ಕಚೇರಿ (*Office*).

ಈ ಪಂಚಭೂತಗಳೇ ಆಕಾಶ, ವಾಯು, ಅಗ್ನಿ ಜಲ, ಪೃಥಿವಿ (ಎಂದರೆ ಭೂಮಿ). ತಾಮಸಾಹಂಕಾರದಿಂದ ಮೊದಲು ಶಬ್ದತನ್ಮಾತ್ರ ಹುಟ್ಟುವುದು. ಶಬ್ದತನ್ಮಾತ್ರೆಯಿಂದ ಆಕಾಶವೂ ಮತ್ತು ಸ್ಪರ್ಶತನ್ಮಾತ್ರೆಯೂ ಹುಟ್ಟುವುವು. ಸ್ಪರ್ಶತನ್ಮಾತ್ರೆಯಿಂದ ವಾಯುವೂ ರೂಪ ತನ್ಮಾತ್ರೆಯೂ ಹುಟ್ಟುವುವು. ರೂಪತನ್ಮಾತ್ರೆಯಿಂದ ತೇಜಸ್ಸೂ (ಎಂದರೆ ಅಗ್ನಿಯೂ) ರಸತನ್ಮಾತ್ರೆಯೂ ಹುಟ್ಟುವುವು. ರಸತನ್ಮಾತ್ರೆಯಿಂದ

ಜಲವೂ ಗಂಧ ತನ್ಮಾತ್ರೆಯೂ ಹುಟ್ಟುವುವು. ಗಂಧತನ್ಮಾತ್ರೆಯಿಂದ ಪೃಥಿವಿ (ಎಂದರೆ ಭೂಮಿ) ಹುಟ್ಟುವುದು.

ತನ್ಮಾತ್ರೆಗಳೆಂದರೆ ಅವುಗಳ ಮುಂದಿನ ಭೂತಗಳ ಸೂಕ್ಷ್ಮಾವಸ್ಥೆಗೆ ಹೆಸರು. ಈ ತನ್ಮಾತ್ರೆಗಳಲ್ಲಿ ಗುಣಗಳು ಕೂಡಿಕೊಂಡಿದ್ದು ಮುಂದಿನ ಭೂತಗಳಲ್ಲಿ ಆಯಾ ಗುಣಗಳು ಕಾಣುವುವು. ಇದರಿಂದ ಶಬ್ದವು (Sound) ಆಕಾಶದಗುಣ; ಸ್ಪರ್ಶವು (Touch) ವಾಯುವಿನಗುಣ. ರೂಪವು (shape) ತೇಜಸ್ಸಿನಗುಣ. ರಸವು (Taste) ಜಲದಗುಣ; ಗಂಧವು (smell) ಭೂಮಿಯಗುಣ.

ರಾಜಸಾಹಂಕಾರವು ಈ ಸಾತ್ತ್ವಿಕ ಮತ್ತು ತಾಮಸಾಹಂಕಾರ ತತ್ತ್ವಗಳ ಉತ್ಪತ್ತಿ ಕಾರ್ಯದಲ್ಲಿ ಸಹಾಯಕವಾಗಿರುವುದು. ತಾನಾಗಿಯೇ ಇದು ಯಾವುದನ್ನೂ ಸೃಷ್ಟಿಸುವುದಿಲ್ಲ.

ಪ್ರಪಂಚದಲ್ಲಿರುವ ಸ್ಥೂಲರೂಪಗಳೆಲ್ಲವೂ ಈ ಪಂಚಭೂತಗಳ ಪರಿಣಾಮಗಳಿಂದುಂಟಾಗಿರುವುವೆಂದು ಶಾಸ್ತ್ರಗಳಲ್ಲಿ ಹೇಳಿರುವುದು. ಈ ಪರಿಣಾಮ ವಿಶೇಷಗಳು (Transformations) ಬಹಳ ಆಶ್ಚರ್ಯಕರಗಳಾದ ವಿಷಯ. ಈ ಪರಿಣಾಮಗಳು ಹೇಗೆ ಆಗುವುವು ಎಂದು ಊಹಿಸುವುದಕ್ಕೂ ಆಗುವುದಿಲ್ಲ. ಇದನ್ನೇ ಪ್ರಕೃತಿಯ ವಿಚಿತ್ರ ಸೃಷ್ಟಿ ವಿಶೇಷವೆನ್ನುವರು. ಇವೆಲ್ಲಾ ಭಗವಂತನ ಸಂಕಲ್ಪದಿಂದ ನಡೆಯುವುವು. ಉದಾಹರಣೆಗೆ ನಮ್ಮ ಶರೀರವನ್ನೇ ತೆಗೆದುಕೊಳ್ಳೋಣ. ನಮ್ಮಶರೀರವು ಪಂಚ ಭೂತಗಳ ಪರಿಣಾಮದಿಂದಾಗಿರುವುದಾಗಿ ಶಾಸ್ತ್ರಗಳಲ್ಲಿ ಹೇಳಿರುವುದು. ನಮ್ಮಶರೀರದಲ್ಲಿರುವ ನರಗಳು, ರಕ್ತ, ಮಾಂಸಖಂಡಗಳು, ಕರುಳು, ಚರ್ಮ, ಉಗುರು, ಮೂಳೆ ಇವೊಂದೊಂದೂ ಪಂಚಭೂತಗಳ ಪರಿಣಾಮವೆಂದಾಗ ನಮಗೆ ಆಶ್ಚರ್ಯವಾಗದಿರದು. ನಮಗೆ ಆಹಾರವಾದ ವಿವಿಧ ಧಾನ್ಯಗಳು, ವಿವಿಧಪಾನೀಯಗಳೆಲ್ಲವೂ ಪಂಚಭೂತಗಳ ಪರಿಣಾಮ ವಿಶೇಷಗಳು. ನಾವು ಉಡುವ ವಿವಿಧ ಉಡುಪುಗಳು, ಉಪಯೋಗಿಸುವ ವಿವಿಧ ಸಾಮಗ್ರಿಗಳು, ಅವುಗಳನ್ನು ತಯಾರಿಸುವ ವಿವಿಧ ಯಂತ್ರಗಳು; ವಿವಿಧ ವಿಚಿತ್ರಗಳಾದ ಮರಗಳು, ಹಣ್ಣು, ಹೂವುಗಳೆಲ್ಲವೂ ಪಂಚಭೂತಗಳ ಪರಿಣಾಮಗಳು

ಒಂದು ಮೃತಶರೀರವನ್ನು ಸುಟ್ಟರೆ ಅದರಲ್ಲಿರುವ ವಾಯು ಭಾಗವೆಲ್ಲಾ ವಾಯುವಿನೊಡನೇರಿ ಹೋಗುವುದು. ಅಗ್ನಿಭಾಗವೆಲ್ಲವೂ ಉರಿದು ಉಷ್ಣವನ್ನುಂಟುಮಾಡುವುದು, ನೀರಿನಭಾಗವೆಲ್ಲವೂ ಆವಿಯಾಗಿ ಆಕಾಶಕ್ಕೆ ಹೋಗುವುವು, ಭೂಭಾಗವೆಲ್ಲವೂ ಬೂದಿಯಾಗಿ ಭೂಮಿಯೊಡನೆ ಸೇರಿ ಮಣ್ಣಾಗಿ ಹೋಗುವುದು. ಒಂದು ಬಟ್ಟೆಯನ್ನೋ, ಕಾಗದವನ್ನೋ ಮೃತಶರೀರವನ್ನೋ ಸುಟ್ಟರೆ ಅವೆಲ್ಲವೂ ಭಸ್ಮವಾಗಿ ಬಿಡುವುವು. ಆದರೆ ಆಭಸ್ಮದಿಂದ ಮೊದಲಿನ ಪದಾರ್ಥಗಳನ್ನು ಮಾನವನಿಂದ ಪಡೆಯುವುದಕ್ಕಾಗುವುದಿಲ್ಲ. ಈ ವೈಚಿತ್ರ್ಯವನ್ನು ಯೋಚಿಸಿದರೇನೇ ಪರಮಾತ್ಮನ ಸೃಷ್ಟಿ ಆಶ್ಚರ್ಯವನ್ನುಂಟು ಮಾಡದಿರದು. ಇವು ಯಾವುದನ್ನೂ ವಿಮರ್ಶಿಸದೆ ಮಾನವನು ಇವೆಲ್ಲಾ ಆಯಾ ಪದಾರ್ಥಗಳಗುಣ (Nature) ಎಂದಿಷ್ಟು ಮಾತ್ರಹೇಳಿ ಎಲ್ಲವನ್ನೂ ಅನುಭವಿಸುತ್ತಿರುವನು.

ಪ್ರಪಂಚ ಸೃಷ್ಟಿಗೆ ಮೂಲಪ್ರಕೃತಿಯೇ ಆರಂಭ ವಸ್ತು. ಅದನ್ನು ಪ್ರಕೃತಿಯೆಂದೂ, ಅವಿದ್ಯೆಯೆಂದೂ, ಮಾಯೆಯೆಂದೂ ಶಾಸ್ತ್ರಗಳಲ್ಲಿ ಕರೆದಿರುವುದು. ವಿಕಾರಾಸ್ಪದವಾದ ಮಹತ್ತಿಗೆ ಮೂಲ ಕಾರಣವಾದ್ದರಿಂದ ಅದಕ್ಕೆ ಪ್ರಕೃತಿಯೆಂದು ಹೆಸರು. ಜೀವಾತ್ಮನಿಗೆ ಪ್ರಾಪಂಚಿಕ ವಿಷಯಗಳಲ್ಲಿ ಅಭಿರುಚಿಯುಂಟಾಗುವಂತೆ ಮಾಡಿ ಅವನ ಸ್ವಾಭಾವಿಕವಾದ ಜ್ಞಾನಾನಂದಗಳನ್ನು ನಿರೋಧಿಸಿ ಸಂಸಾರದಲ್ಲಿ ತೊಳಲುವಂತೆಮಾಡುವುದರಿಂದ ಇದನ್ನು ಅವಿದ್ಯೆಯೆನ್ನುವರು. ವಿಚಿತ್ರ ಸೃಷ್ಟಿಯನ್ನುಂಟುಮಾಡುವುದರಿಂದ ಮಾಯೆಯೆಂದೂ ಕರೆಯುವರು.

"ಮಾಯಾಂತು ಪ್ರಕೃತಿಂ ವಿದ್ಯಾತ್" ಎಂದು, ಮಾಯೆಯೆಂಬ ಪದಕ್ಕೆ ವಿಚಿತ್ರಸೃಷ್ಟಿಯನ್ನುಂಟುಮಾಡುವ ಪ್ರಕೃತಿ ಎಂದು ಅರ್ಥ. ಭಗವದ್ಗೀತೆಯಲ್ಲಿ ಇದನ್ನು ಶ್ರೀಕೃಷ್ಣನು ಸ್ಪಷ್ಟವಾಗಿ ಹೇಳಿವನು. ಅದರಿಂದ ಕೆಲವರು ಹೇಳುವಂತೆ ಮಾಯೆಯೆಂದರೆ ಸುಳ್ಳೆಂದಾಗಲಿ, ಭ್ರಮೆಯೆಂದಾಗಲಿ ಅರ್ಥವಾ ಇಂದ್ರಜಾಲವೆಂದಾಗಲಿ ಅರ್ಥವಲ್ಲ.

ಅಹಂಕಾರ ತತ್ತ್ವದ ವಿಷಯವನ್ನು ಹೇಳುವಾಗ ಮೇಲೆ ಈ ಗುಣಗಳ ವಿಷಯವು ಸೂಚಿಸಲ್ಪಟ್ಟಿರುವುದು. ಪ್ರಪಂಚದಲ್ಲಿರುವ ಮಾನವರನ್ನು ತನ್ನ ವಶಮಾಡಿಕೊಂಡು ತಮ್ಮ ಕೈಗೊಂಬೆಗಳಂತೆ ಅವರನ್ನು ಆಡಿಸುವ ಈ ತ್ರಿಗುಣಗಳ ವಿಷಯವನ್ನು ಎಲ್ಲರೂ ಆವಶ್ಯಕವಾಗಿ ಅರಿಯಬೇಕಾದ್ದೇ. ಮಾನವನಲ್ಲಿ ಈ ಮೂರು ಗುಣಗಳೂ ಯಾವಾಗಲೂ ಇರುವುವಾದರೂ ಆಯಾ ಗುಣಗಳು ಸಂದರ್ಭಾನುಸಾರವಾಗಿ ಉದ್ರೇಕಗೊಂಡಾಗ ಮನುಷ್ಯನು ಅವುಗಳಿಗೆ ವಶನಾಗಿ ಅವಕ್ಕನುಸಾರವಾಗಿ ಕಾರ್ಯಗಳನ್ನು ಮಾಡುವನು. ಸಾತ್ತ್ವಿಕಗುಣವು ಉದ್ರೇಕಗೊಂಡಾಗ ಮಾನವನಲ್ಲಿ ಒಳ್ಳೆಜ್ಞಾನ, ಶಾಂತಿ, ಸಂತೋಷ, ದಯೆ, ಧರ್ಮಬುದ್ಧಿ, ಭಕ್ತಿ – ಇತ್ಯಾದಿ ಸದ್ಗುಣಗಳು ಉದ್ರೇಕಗೊಂಡು ಒಳ್ಳೆಯ ಕಾರ್ಯಗಳನ್ನು ಮಾಡುವನು. ರಾಜಸಗುಣವು ಉದ್ರೇಕಗೊಂಡಾಗ ಅಹಂಕಾರ ಮಮಕಾರಗಳು ಉದ್ರೇಕಗೊಂಡು ತನ್ನ ಸಂಸಾರಿಕ ಸುಖಭೋಗಗಳಿಗೆ ಅವಶ್ಯಕವಾದ ಕಾರ್ಯಗಳನ್ನು ಮಾಡುವನು. ತಾಮಸಗುಣದಿಂದ ಮನುಷ್ಯನಲ್ಲಿ ಆಲಸ್ಯ, ಸೋಮಾರಿತನ, ನಿದ್ರೆ, ಅವಿವೇಕ ಇತ್ಯಾದಿ ಗುಣಗಳು ಉದ್ರೇಕಗೊಂಡು ಅವುಗಳಿಗೆ ವಶನಾಗಿ ಅದಕ್ಕನುಗುಣವಾದ ಕಾರ್ಯಗಳನ್ನು ಮಾಡುತ್ತಿರುವನು, ಕೋಪವು ರಾಜಸಗುಣದಿಂದ ಉದ್ಭವಿಸುವುದು.

ಒಬ್ಬ ಮನುಷ್ಯನು ಗುಡಿಗೋ ಅಥವಾ ಭಕ್ತಿರೂಪವಾದ ಉಪನ್ಯಾಸಕ್ಕೋ ಹೋಗಿದ್ದು ಹೊರಕ್ಕೆ ಬಂದಾಗ ಅವನ ಮನಸ್ಸು ಶಾಂತವಾಗಿದ್ದು ಧರ್ಮಬುದ್ಧಿಯೊಡನೆ ಕೂಡಿರುವುದು ಸಹಜ. ಹೊರಗೆ ನಿಂತಿರುವ ಭಿಕ್ಷುಕರಿಗೆ ಸ್ವಲ್ಪ ದಾನಮಾಡುವನು. ಅದು ಅವನಲ್ಲಿ ಸಾತ್ತ್ವಿಕ ಗುಣ ತಲೆಯೆತ್ತಿರುವುದಕ್ಕೆ ಗುರುತು. ಆ ಸಮಯದಲ್ಲಿ ಅವನ ದ್ವೇಷಿಗಳಲ್ಲಿ ಯಾರಾದರೂ ಅವನ ಎದುರಿಗೆ ಬಂದರೆ ಕೂಡಲೇ ಅವನ ಸಾತ್ತ್ವಿಕ ಬುದ್ಧಿಯೆಲ್ಲವೂ ಮಾಯವಾಗಿ ಕೋಪವು ಉದ್ರೇಕಗೊಳ್ಳುವುದು. ಇದು ರಾಜಸಗುಣ ತಲೆಯೆತ್ತಿದುದರ ಪ್ರಭಾವ. ಯಾವ ಕಾರ್ಯಕ್ಕೂ ಮನಸ್ಸು ಬರದೆ ಸೋಮಾರಿತನವು ಉಂಟಾದಾಗ ಅದು ತಾಮಸಗುಣದ ಉದ್ರೇಕ.

ಭಗವದ್ಗೀತೆಯಲ್ಲಿ ಈ ಮೂರು ಗುಣಗಳ ವಿಷಯವನ್ನು ಶ್ರೀಕೃಷ್ಣನು ಈರೀತಿಯಾಗಿ ಹೇಳಿರುವನು (14-5ರಿಂದ 10). ಸತ್ತ್ವಗುಣವು ನಿರ್ಮಲವಾದದ್ದು. ಅದು ನಿಜವಾದ ಜ್ಞಾನವನ್ನೂ ಸುಖವನ್ನೂ ಉಂಟುಮಾಡುವುದು; ಮತ್ತು ಅವುಗಳನ್ನು ಪಡೆಯುವಂತೆ ಮಾಡುವುದು. ರಜೋಗುಣವು ಇಂದ್ರಿಯ ಸುಖಗಳ ಆಸೆಯನ್ನುಂಟು ಮಾಡಿ ಪ್ರಾಪಂಚಿಕ ವಿಷಯಗಳಲ್ಲಿ ದಾಹ ಹೆಚ್ಚುವಂತೆ ಮಾಡಿ ಅವುಗಳಿಗಾಗಿ ಪ್ರಯತ್ನಿಸುವಂತೆ ಮಾಡುವುದು. ತಮೋಗುಣವು ಅಜ್ಞಾನ ಅಶ್ರದ್ಧೆ ಆಲಸ್ಯ, ಅತಿನಿದ್ರೆ, ಸೋಮಾರಿತನ ಇವುಗಳನ್ನುಂಟು ಮಾಡುವುದು.

ಮಾನವ ಜೀವಿತದಲ್ಲಿ ಈ ಗುಣಗಳ ಪ್ರಾದುರ್ಭಾವವನ್ನು ಎಲ್ಲರೂ ಜಾಗರೂಕತೆಯಿಂದ ಗಮನಿಸ ಬೇಕು. ಮಾನವನ ಏಳಿಗೆಗಾಗಲಿ ಅವನ ಅಧಃಪತನಕ್ಕಾಗಲಿ ಈ ಗುಣಗಳ ಪ್ರಾದುರ್ಭಾವವೇ ಕಾರಣ. ಈ ಗುಣಗಳು ಮಾನವನ ಮನಸ್ಸಿನ ಮೇಲೆ ಪರಿಣಾಮವನ್ನುಂಟು ಮಾಡಿ ಮನಸ್ಸು ಆ ಗುಣಗಳಿಂದ ಕೂಡಿಕೊಳ್ಳುವಂತೆ

# ಹೊಸದಾಗಿ ಬಿಡುಗಡೆಯಾಗಿರುವ ಉತ್ಕೃಷ್ಟ ಗ್ರಂಥಗಳು

| | | | | |
|---|---|---|---|---|
| 1. | ಪೋತನ ಭಾಗವತಂ | ತೆಲುಗು | ಭಾಗ–1 | ರೂ 5–70 |
| 2. | ,, (ತೃತೀಯ ಸ್ಕಂದಂ) | | ಭಾಗ–2 | ರೂ 6–35 |
| 3. | ಅನ್ನಮಾಚಾರ್ಯ ಅಧ್ಯಾತ್ಮ ಸಂಕೀರ್ತನಲು | ತೆಲುಗು | ಭಾಗ–3 | ರೂ 13–00 |
| 4. | ದೇವಾಲಯಮುಲು–ತತ್ತ್ವವೇತ್ತಲು | ತೆಲುಗು | | ರೂ 7-20 |
| 5. | ಭಾರತೀಯ ದೇವಾಲಯಮುಲು | ,, | | ರೂ 5–00 |
| 6. | ಲಲಿತಾ ಸಹಸ್ರನಾಮಮು | ,, | | ರೂ 3–00 |
| 7. | ಅನ್ನಮಯ್ಯ ಅಂತರಂಗಮುಲೋ ಅಲಮೇಲುಮಂಗ | ,, | | ರೂ 2–40 |
| 8. | ಭಾರತಾವತರಣಂ | ,, | | ರೂ 1–30 |
| 9. | ಎ ಹ್ಯಾಂಡ್ ಬುಕ್ ಆಫ್ ಹಿಂದೂ ರಿಲಿಜನ್ | ಇಂಗ್ಲಿ | | ರೂ 2–70 |
| 10. | ಸ್ವಾಮಿ ಪಟ್ಟಿನತ್ತಾರ್ | ತಮಿಳು | | ರೂ 1–00 |
| 11. | ಸಂತ ತ್ಯಾಗರಾಜ | ಹಿಂದಿ | | ರೂ 5–30 |
| 12. | ಗುರುಜಗನ್ನಾಥದಾಸರ ಕೃತಿಗಳು | ಕನ್ನಡ | | ರೂ 8–40 |

ಅಂಚೆ ವೆಚ್ಚ ಪ್ರತ್ಯೇಕ, ಎಂ. ಓ. ಹಣವನ್ನು (ಪುಸ್ತಕದ ಬೆಲೆ ಹಾಗೂ ಅಂಚೆವೆಚ್ಚ ಕನಿಷ್ಟ ರೂ 6–00) ಡೆಪ್ಯೂಟಿ ಇ.ಓ. ತಿ.ತಿ.ದೇ. ತಿರುಪತಿ ಇವರಿಗೆ ಕಳುಹಿಸಿ.

ಸೇಲ್ಸ್‌ವಿಂಗ್ ಆಫ್ ಪಬ್ಲಿಕೇಷನ್ಸ್,
ತಿ. ತಿ. ದೇ., ತಿರುಪತಿ.

# ಶ್ರೀ ಕೋದಂಡರಾಮಸ್ವಾಮಿ ದೇವಾಲಯ
## ತಿರುಪತಿ
## ಆರ್ಜಿತ ಕಲ್ಯಾಣೋತ್ಸವ

ತಿರುಪತಿಯ ಶ್ರೀ ಕೋದಂಡರಾಮಸ್ವಾಮಿ ದೇವಾಲಯದಲ್ಲಿ ಸ್ವಾಮಿಯ ಕಲ್ಯಾಣೋತ್ಸವವನ್ನು ಆರ್ಜಿತ ಸೇವೆಯನ್ನಾಗಿ ಪ್ರವೇಶಗೊಳಿಸಲಾಗಿದೆ. ಭಕ್ತಾದಿಗಳು ಆರ್ಜಿತ ಕಲ್ಯಾಣೋತ್ಸವ ಶುಲ್ಕ ರೂ 200–00 ಅನ್ನು ಸಲ್ಲಿಸಿ ಈ ಸೇವೆಯಲ್ಲಿ ಭಾಗವಹಿಸಬಹುದು.

ವಿಜಯ ನಗರದರಸರ ಕಾಲದಲ್ಲಿ ಜೀರ್ಣೋದ್ಧಾರವಾಗಿರುವ ಈ ಪವಿತ್ರ ದೇವಾಲಯವು ತಿರುಪತಿ ನಗರದ ಮಧ್ಯೆ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಹತ್ತಿರ ಅಲಿಪಿರಿಗೆ ಹೋಗುವ ಹಾದಿಯಲ್ಲಿ 2 ಫರ್ಲಾಂಗ್ ದೂರದಲ್ಲಿದೆ. ಆಕರ್ಷಕವಾದ ಪ್ರಶಾಂತವಾದ ಸ್ಥಳ.

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕಾಗಿ ವಿನಂತಿ.

**ತಿ.ತಿ.ದೇ.**

ಮಾಡುವುವು. ಮನಸ್ಸಿನ ಪ್ರೇರಣೆಯಿಂದ ಇಂದ್ರಿಯಗಳು ಕಾರ್ಯಮಾಡುವುವು. ಈ ಕಾರ್ಯಗಳೇ ಕರ್ಮವೆಂದು ಕರೆಯಲ್ಪಟ್ಟು, ಮಾನವನಿಗೆ ಪುನರ್ಜನ್ಮಗಳಿಗೂ, ಸುಖದುಃಖಗಳಿಗೂ, ಕಾರಣವಾಗುವುವು. ಇದರಿಂದ ಮಾನವನ ಸತ್ಕರ್ಮ ದುಷ್ಕರ್ಮಗಳಿಗೂ ಈ ತ್ರಿಗುಣಗಳಿಗೂ ನಿಕಟವಾದ ಸಂಬಂಧವಿರುವುದು ಈ ವಿಷಯವು ಮುಂದೆ ಚರ್ಚಿಸಲ್ಪಡುವುದು. (ಸಶೇಷ)



( 15ನೇ ಪುಟದಿಂದ)

## ವಲ್ಲಭಾಚಾರ್ಯರ ತಾತ್ತ್ವಿಕ ವಿಚಾರಗಳು

ಪರಬ್ರಹ್ಮನು ಸತ್ಯನು. ಸತ್, ಚಿತ್, ಆನಂದ, ರಸ್ವಸರೂಪನು. ಅವನ ಲೀಲಾವಿಶೇಷದಿಂದ ಜಗತ್ಸೃಷ್ಟಿಯಾಯಿತು. ಅದರಲ್ಲಿ ಕಾಣುವ ವೈವಿಧ್ಯವೂ ಕೂಡ ಆತನ ಲೀಲೆಯೇ. ಅಹಂಕಾರ ಮಮಕಾರಗಳು ಜೀವಗಳಿಗೆ 'ಸಂಸಾರ ಬಂಧನ' ಏರ್ಪಡಿಸುತ್ತವೆ. ಜ್ಞಾನಭಕ್ತಿ ಮುಂತಾದವುಗಳಿಂದ ಈ ಸಂಸಾರ ಬಂಧವನ್ನು ಕಳೆದುಕೊಳ್ಳಬೇಕು. ಅದ್ವೈತಾನಂದವನ್ನೇ ಗುರಿಯಾಗಿಟ್ಟುಕೊಂಡ ಈ ಮಾರ್ಗವು ಬಹುಜನ ಪ್ರಿಯವಾಗಿದೆ.

ಶ್ರೀ ವಲ್ಲಭಾಚಾರ್ಯರು ಸಮಗ್ರಭಾರತದ ಯಾತ್ರೆಮಾಡಿ ವೈಷ್ಣವಧರ್ಮದ ಶ್ರೀಕೃಷ್ಣ ಭಕ್ತಿಯ ಪ್ರಸಾರವಮಾಡಿದರು. ಸಂಸ್ಕೃತದಲ್ಲಿ ಶ್ರೀಕೃಷ್ಣಭಕ್ತಿ ಪರವಾದ ಗ್ರಂಥಗಳನ್ನು ರಚಿಸಿದರು. ಕ್ರಿಸ್ತಾಬ್ದ 1506 ರಲ್ಲಿ ನಾಥದ್ವಾರದಲ್ಲಿ, 'ಶ್ರೀನಾಥಜೀ' ಮಂದಿರವನ್ನು ಪ್ರತಿಷ್ಠಾಪಿಸಿದ್ದಾರೆ. ವ್ರಜ, ವೃಂದಾವನಗಳಲ್ಲಿ ಶ್ರೀಕೃಷ್ಣ ವಿಗ್ರಹಗಳನ್ನು ಸ್ಥಾಪಿಸಿದ್ದಾರೆ. ಇವರ ಮಕ್ಕಳಾದ ಗೋಸ್ವಾಮಿ ವಿಠಲನಾಥಜೀಯುವರು ಶ್ರೀಕೃಷ್ಣ ಭಕ್ತಿಯ ಪ್ರಸಾರಮಾಡಿ, ಗುಜರಾಥದಲ್ಲಿ ಅನೇಕ ಮಂದಿರಗಳನ್ನು ಕಟ್ಟಿಸಿ 'ಸಂತ ಶ್ರೇಷ್ಠ' ರೆಂದು ಹೆಸರುಗಳಿಸಿದರು.

ಕ್ರಿಸ್ತಾಬ್ದ 1531 ಇವರು ಪರಂಧಾಮವನ್ನೈದಿದರೆಂದು ಹೇಳುತ್ತಾರೆ. ಗಂಗಾನದಿಯ ತೀರದಲ್ಲಿ ಮಾಯವಾದರು ಎಂದು ಕೆಲವರು ಅಭಿಪ್ರಾಯ ಪಡುತ್ತಾರೆ ಮಹಾತ್ಮರು ಕಣ್ಮರೆಯಾದರೂ ಅವರು ಮಾಡಿದ ಮಹಾಕಾರ್ಯಗಳು ಭಕ್ತವೃಂದಕ್ಕೆ ಮಾರ್ಗದರ್ಶಕಗಳಾಗಿವೆ.



# ಸ್ವಾಧ್ಯಾಯದ ಹಿರಿಮೆ

ತನ್ನ ತಾನರಿತವನು ತನ್ನನಾಗದೆ ನಿಂತು|
ತನ್ನ ತನದಿಂದನ್ಯರಿಂಗುಪಕರಿಪ್ಪಂ ||
ತನ್ನ ತಾನರಿಯ ಮುಕ್ತ ಭಿನ್ನನಾಗದವ|
ಮಾನ್ಯನರ್ಪಿಗೆ ಧನ್ಯ ಮರುಳಮುನಿಯ
(ಮರುಳ ಮುನಿಯನ ಕಗ್ಗ)

ಮಾನವ ತನ್ನನ್ನು ತಾನು ಅರಿತು, ಇತರರಿಗೆ ಉಪಕಾರಿಯಾಗಿ ಬಾಳುವಾಗ ಮಾನ್ಯನು. ಇಂತಹ ವಿವೇಕವನ್ನು ಪಡೆಯಬೇಕಾದರೆ ಸ್ವಾಧ್ಯಾಯವನ್ನು ಮಾಡಬೇಕು. ಸ್ವಾಧ್ಯಾಯವೆಂದರೆ 'ಸ್ವಯಂ ಅಧ್ಯಯನ' ಎಂದು ಹೇಳಬಹುದು. ಸ್ವಯಂ ಅಧ್ಯಯನವೇ ಸ್ವಾನುಭವ ಪಡೆಯುವುದು. ಇಂತಹ ಸ್ವಾನುಭೂತಿಯೇ ಸತ್ಯ.

'ಸ್ವಾಧ್ಯಾಯ'ವು ರಾಜಯೋಗ ನಿಯಮದ ಚತುರ್ಥ ಅಂಗ: ನಮಗೆ ಮಹಾತ್ಮರ ನೇರ ಸತ್ಸಂಗ ದೊರಕದಿದ್ದಾಗ ಸ್ವಾಧ್ಯಾಯವು ಸತ್ಸಂಗವಾಗಿ ಪರಿಣಮಿಸುತ್ತದೆ. ನಮ್ಮ ವಿಕ್ಷೇಪವನ್ನು ಅಳಿಸುತ್ತದೆ.

ಬರಿ ಓದುಗಾರಿಕೆ, ಬರಿ ಬುದ್ಧಿ ಬೆಳೆಸಿಕೊಳ್ಳುವುದು ಸ್ವಾನುಭವವಾಗಲಾರದು. ಅರಿವಿನ ಕಣ್ಣು ತೆರೆಯಬೇಕಾದರೆ ನಮ್ಮ ಮಮತಾಗುಣದ ಕಿಲುಬನ್ನು ತೊಳೆದಾಗ ಮಾತ್ರ ಸಾಧ್ಯ. ಬರಿಯ ಗ್ರಂಥ ಪಠಣ ಒಂದು ನಿರ್ಜೀವ ಸತ್ಯ, ನೈಜ ಜ್ಞಾನವನ್ನು ಇದು ನೀಡಲಾರದು. ಸತತ ಗ್ರಂಥಾಧ್ಯಯನದ ಜೊತೆಗೆ ನಿತ್ಯ ಜೀವನದಲ್ಲಿ ತತ್ತ್ವದ ತಿರುಳನ್ನು ಅನುಸಂಧಾನ ಮಾಡಿದಾಗ ಅರಿವಿನ ಕಣ್ಣು ಅರಳುತ್ತದೆ. ಭಗವದ್ಗೀತೆಯು ಸ್ವಾಧ್ಯಾಯಕ್ಕೆ ಒಂದು ಅಮೂಲ್ಯ ಗ್ರಂಥ.

ಅನುದ್ವೇಗ ಕರಂ ವಾಕ್ಯಂ
ಸತ್ಯಂ ಪ್ರಿಯ ಹಿತಂ ಚಯತ್ ।
ಸ್ವಾಧ್ಯಾಯಾಭ್ಯಸನಂ ಚೈವ
ವಾಙ್ಮಯಂ ತಪ ಉಚ್ಯತೇ ||

ಉದ್ವೇಗವಿಲ್ಲದ ನಡೆ–ನುಡಿ, ಹಿತವಾದ ಪ್ರಿಯವಾದ ಮಾತು, ಇಂತಹವನ್ನು ಸ್ವಾಧ್ಯಾಯ ಮಾಡಿದಾಗ ಅವೇ ಉನ್ನತ ಬಾಳಿಗೆ ಮಾರ್ಗವಾಗುತ್ತವೆ. ಗೀತೆಯ ಅಧ್ಯಯನವೂ ಒಂದು ವಿಧವಾದ ಕ್ರಿಯಾಯೋಗ.

ಬಾಳಿನ ಭವ್ಯತೆಯನ್ನು ಬೆಳಗಿಸುವ ದೀವಿಗೆಗಳು ಮೂರು. ಸ್ವಾಧ್ಯಾಯ, ವಿಜ್ಞಾನ ಮತ್ತು ಸೈವದೊಲುಮೆ. ಇದರಲ್ಲಿ ಸ್ವಾಧ್ಯಾಯ ಪ್ರಧಾನವಾದುದು. ಕಾರಣ ಇದು ಅಂತರಾತ್ಮಕ್ಕೆ ಬೆಳಕನ್ನು ನೀಡುವಂತಹದ್ದು. ಧೀಶಕ್ತಿಯನ್ನು ಪ್ರಚೋದಿಸಲು ಮತ್ತು ಸದ್ವಿವೇಕದ ದೀಪಕ್ಕೆ ಸ್ವಾಧ್ಯಾಯ ಅವಶ್ಯಕ.

ನಮ್ಮ ಕುಂಟಿಕಾದಾಟ, ಕೊರಗು ಜೀವನದಿಂದ ಬೇರ್ಪಟ್ಟ ದೃಷ್ಟಿಯನ್ನು ಒಳಗಡೆ ತಿರುಗಿಸಿ ಸ್ವಾನುಭವವನ್ನು ಪಡೆದಾಗ, ಯಾರಿಗೂ ಬೆಜ್ಜದೆ, ನೆಜ್ಜದೆ ಮುನ್ನಡೆಯಬಹುದು. ಹರುಷ ಅಂಗಡಿಯ ವಸ್ತುವಲ್ಲ, ನಮ್ಮ ಹೃದಯದ ಆನಂದದ ಬತ್ತದ ಚಿಲುಮೆ, ಡಾ|| ಡಿ. ವಿ. ಜಿ. ಅವರು–

ಭಾವರಾಗ ಉದ್ರೇಕ ತಾನೆ ತಪ್ಪೇನಲ್ಲ|
ಧೀವಿವೇಕದ ಸಮತೆಯನರಿದಂತೆ ||
ಸ್ವಾವಿದ್ಯೆಯ ಮೋಹ
ಮಮತೆಯ ನಂಟದಿರೆ |

ಪಾವನವೋ ಹೃನ್ಮಥನ...
ಎನ್ನುತ್ತಾರೆ.

ಈ ಪ್ರಪಂಚದಲ್ಲಿ ಬಂಧಿತರಾದರೂ ಶ್ರುತಿ, ಸ್ಮೃತಿ, ಸತ್ಕಲೆ, ಕಾವ್ಯಗಳನ್ನು ಸ್ವಾಧ್ಯಾಯ ಮಾಡಿ, ಸ್ವಾನುಭವ ಪಡೆದಾಗ ನಗುತ್ತಾ – ನಗಿಸುತ್ತಾ ಇದ್ದಲ್ಲಿ, ಅಂದೇ ನಮ್ಮ ಬಂಧನ ಬಂಧುರವಾಗುತ್ತದೆ.

ನಾವು ಈ ಜಗತ್ತಿನ ಪರಿಸರಗಳಿಂದ ಸುತ್ತುವರಿಯಲ್ಪಟ್ಟಿದ್ದೇವೆ. ಅಜಾಗರೂಕರಾಗದೆ ಆಧ್ಯಾತ್ಮ ಗ್ರಂಥಗಳ ಸತ್ಸಂಗವನ್ನು ಅಧ್ಯಯನ ಮಾಡಿದ್ದೇ ಆದರೆ ಲೋಕಾಚಾರ, ಅನುಭವಾಮೃತ ಸಾಧಿತವಾಗುತ್ತದೆ. ದಿವ್ಯ ಗ್ರಂಥಗಳ ಕರ್ತೃಗಳಾದ ವಾಲ್ಮೀಕಿ, ವ್ಯಾಸರು, ಕನಕದಾಸರು, ಗದುಗಿನ ನಾರಣಪ್ಪ ಮುಂತಾದ ಮಹನೀಯರ ನೇರ ಸಂಪರ್ಕ ಬೆಳೆಯುತ್ತದೆ.

ಸ್ವಾಧ್ಯಾಯಾನ್ಮಾ ಪ್ರಮದಃ
ಸ್ವಾಧ್ಯಾಯ ಪ್ರವಚನಾಭ್ಯಾಂ ನ
ಪ್ರಮದಿತವ್ಯಮ್
– (ತೈತ್ತಿರೀಯೋಪನಿಷತ್)

ಸ್ವಯಂ ಅಧ್ಯಯನವನ್ನು ಎಂದಿಗೂ ಬಿಡಬಾರದು. ಇದರಿಂದ ನಮ್ಮ ಭಾವನೆಗಳು ದೈವತ್ವದಲ್ಲಿ ಲೀನಗೊಳ್ಳುತ್ತವೆ. ಅನುಭವಿಯಾಗಿದ್ದು ಪರಮಾತ್ಮನೊಡನೆ ನೇರ ಸಂಪರ್ಕವನ್ನು ಹೊಂದಿದ ಶರಣರು, ಜ್ಞಾನಿಗಳು ನೀಡಿದ ಪ್ರವಚನಗಳ ಸಾರಾಂಶಗಳೇ ಸದ್ಗ್ರಂಥಗಳು.

ಇಂಥಹ ಸ್ವಾಧ್ಯಾಯವನ್ನು ಪಡೆದವರೇ ಸಾಧಕರು. ಸ್ವಾಧ್ಯಾಯದ ಪ್ರಾಯೋಗಿಕ ಸ್ವಾಭಾವವೇನೆಂದರೆ ಪ್ರಾಪಂಚಿಕ ಭಾವನೆಗಳನ್ನು ನಿಶ್ಶಕ್ತಗೊಳಿಸಿ ಆಧ್ಯಾತ್ಮಿಕ ಭಾವನೆಗಳನ್ನು ಉದ್ದೀಪನಗೊಳಿಸುವುದು. ಏಕಾಗ್ರತೆಗೂ ಇದರಿಂದ ಸಹಾಯವಾಗುತ್ತದೆ. ಉಜ್ಜೀವನಕ್ಕೆ ಪೋಷಕವೂ ಪೂರಕವೂ ಆಗುತ್ತದೆ. ಸ್ವಾಧ್ಯಾಯದ ಅಭ್ಯಾಸವು ಬಲಗೊಂಡಾಗ ಮಾನಸಿಕ ಅಂತಃಸ್ಮೃತಿಯಲ್ಲಿ ಆಧ್ಯಾತ್ಮಿಕ ಭಾವನೆಗಳನ್ನು ಉತ್ತಾಪಿಸಿ ಶಾಂತಿ ನೀಡುತ್ತದೆ. ಪ್ರತಿದಿನವೂ ನಿಯಮದಿಂದ ಗ್ರಂಥಗಳನ್ನು ಅಧ್ಯಯನ ಮಾಡಿ ಶುದ್ಧ ವಿಚಾರವುಳ್ಳವರಾಗಿರುವುದೇ ಸ್ವಾಧ್ಯಾಯದ ಪರಮ ಪ್ರಯೋಜನ! ಇಂತಹ ಕ್ರಮಬದ್ಧ ಸ್ವಾಧ್ಯಾಯವು ನೈಜ ಸಂಸ್ಕೃತಿಯನ್ನು ಧಳವಸೆಯನ್ನು ಅಪಾರ ಶಕ್ತಿಯನ್ನು ತುಂಬಿ

ಮತ್ತೀಗೆರೆ ಅನಂತು

# ಸಪ್ತಗಿರಿ

## ತಿ.ತಿ.ದೇ. ಗಳ ಸಚಿತ್ರ ಮಾಸಪತ್ರಿಕೆ

ತಿರುಮಲೆ ತಿರುಪತಿ ದೇವಸ್ಥಾನಗಳ ವತಿಯಿಂದ ಹೊರಬರುತ್ತಿರುವ ಸಚಿತ್ರ ಮಾಸಪತ್ರಿಕೆ ಸಪ್ತಗಿರಿ ಧಾರ್ಮಿಕ ಸಾಂಸ್ಕೃತಿಕ ವಿಷಯಗಳಿಗೆ ಮೀಸಲಾಗಿ ಕನ್ನಡ, ತೆಲುಗು, ತಮಿಳು, ಆಂಗ್ಲ, ಹಿಂದಿ ಭಾಷೆಗಳಲ್ಲಿ ವೈವಿಧ್ಯದೊಡನೆ ಏಕತೆಯನ್ನುಳಿಸಿ ಕೊಂಡು ದಿನೇ ದಿನೇ ಜನಪ್ರಿಯವಾಗುತ್ತಿದೆ. ಸಪ್ತಗಿರಿಯ ಕರ್ನಾಟಕ ಪ್ರಾಂತ್ಯದ ಏಜಂಟರ ಪಟ್ಟಿ ಕೆಳಕಂಡಂತಿದೆ.

ಎಸ್. ರಾಮಕೃಷ್ಣಯ್ಯ
ಶ್ರೀ ಮಾರುತಿ ಕಾಫಿ ವರ್ಕ್ಸ್
ಸ್ಟೇಷನ್ ರಸ್ತೆ, ಹೊಸಪೇಟೆ.

ಎ. ಶಶಿಕಾಂತ್
1949, ಸಾಲಿಗಲ್ಲಿ
ಚಿಕ್ಕೋಡಿ–591201

ಎಸ್. ವಿ. ಶೆಟ್ಟಿಗಾರ್
ನ್ಯೂಸ್ ಏಜಂಟ್
ಸಿದ್ಧಕಟ್ಟೆ ಬಂಟ್ವಾಳ ತಾ॥
ದ. ಕನ್ನಡ

ಸಿ. ಸತ್ಯನಾರಾಯಣ
ಬಾಲಾಜಿ ಏಜನ್ಸೀಸ್
18, ಹಳೆಕಚೇರಿ ರಸ್ತೆ, ಬಳ್ಳಾರಿ.

ಎಸ್.ವಿ. ಕೃಷ್ಣಮೂರ್ತಿ
447, ಗುರುಕೃಪಾ
ಸುಬ್ಬರಾಯ ಪೇಟೆ, ಚಿಕ್ಕಬಳ್ಳಾಪುರ

ವೆಂಕಟೇಶ ಶಿವಾಜಿ ಝುಂಗಾಡೆ
ರಾಮಕೃಷ್ಣ ರೆಡಿಮೇಡ್ ಸ್ಟೋರ್ಸ್
ಮುದ್ದೇಬಿಹಾಳ, ಬಿಜಾಪುರ.

ಆರ್.ಜಿ. ಏಜನ್ಸಿ
ಸೋಮವಾರಪೇಟೆ
ರಾಯಚೂರು.

ಪಿ.ಎಸ್. ನಾಗರತ್ನಮ್ಮ
ಸಪ್ತಗಿರಿ ಏಜಂಟ್
837, ಪಿ.ಎಸ್.ಕೆ. ರಸ್ತೆ
ಬಂಗಾರಪೇಟೆ.

ಶ್ರೀಮತಿ ಬಿ.ಎಚ್. ಕಟ್ಟಿ
ಉಪ್ಪಳ ಬುರುಜು ಹಿಂಭಾಗದರಸ್ತೆ
ಬಿಜಾಪುರ.

ಜೆ.ಎಸ್. ರಾಮಮೂರ್ತಿ
C/O ಜಿ.ಎಸ್. ಪಾರ್ಥಸಾರಥಿ
ಕಠಾರಿ ಪಾಳ್ಯ, ಕೋಲಾರ

ಬಿ.ಎಸ್. ವೇಣುಗೋಪಾಲನ್,
ಕೆಸ್ತೂರು ಅಂಚೆ,
ತುಮಕೂರು ಜಿಲ್ಲೆ.

ಟಿ.ಬಸಪ್ಪ
ಶ್ರೀರಾಮ ಭಾವಸಾರಕ್ಷತ್ರಿಯಕೋ-ಆಪ-ಸೊಸೈಟಿ
ತುಳಜಾಭವಾನಿರಸ್ತೆ, ಶಿವಮೊಗ್ಗ.

ಹನುಮಂತರಾವ್ ಕುಲಕರ್ಣಿ
ನ್ಯೂಸ್ ಏಜಂಟ್,ಬಸ್‌ಸ್ಟಾಂಡ್‌ರೋಡ್
ಗಂಗಾವತಿ.

ಎಸ್. ಜಯರಾಂ
731, ೪ ಕ್ರಾಸ್ 2 ಮೇನ್
ಎಚ್. ಎ. ಎಲ್. 2 ಸ್ಟೇಜ್
ಬೆಂಗಳೂರು–38

ಬಿ. ಆರ್. ವೆಂಕಟೇಶ ಪ್ರಸಾದ್
929, (ಹೊಸ ನಂ–4) 3 ನೇ ಮುಖ್ಯರಸ್ತೆ
"C" E–B ಬ್ಲಾಕ್, 2 ಸ್ಟೇಜ್,
ರಾಜಾಜಿನಗರ, ಬೆಂಗಳೂರು–10.

ಬಿ. ನಾಗರಾಜ್
1418 ಕೆ. ಟಿ. ರಸ್ತೆ
ಕೋಟೆ, ಚೆನ್ನಪಟ್ಟಣ

ಶಂಕರಪ್ಪ
ಫೋಟೋಗ್ರಾಫರ್
6 ಕ್ರಾಸ್, ಕೆ. ಟಿ. ಜಿ. ನಗರ
ಉರ್ದುಶಾಲೆಯಬಳಿ
ದಾವಣಗೆರೆ

ಎಸ್. ಶ್ರೀನಿವಾಸ ತಂತ್ರಿ
ಶರಾವತಿ ಹೆಂಚಿನ ಕಾರ್ಖಾನೆ
ಮಾವಿನಕುರ್ವೆ
ಹೊನ್ನಾವರ ತಾಲ್ಲೂಕು

ಏಜಂಟರಿಲ್ಲದ ಕಡೆ ಏಜಂಟರು ಬೇಕಾಗಿದ್ದಾರೆ. ಆತ್ಯಾಕರ್ಷಕ ಕಮೀಷನ್ ಉಂಟು. ಕೂಡಲೇ ವ್ಯವಹರಿಸಿ.

**ಸಂಪಾದಕರು ತಿ.ತಿ.ದೇ. ತಿರುಪತಿ.**

ಚೈತನ್ಯ ಸ್ಫೂರ್ತಿ ನೀಡುತ್ತದೆ. ತೀವ್ರತರವಾದ ಅಧ್ಯಯನಾಕಾಂಕ್ಷೆ ಇರಬೇಕು. ಇಲ್ಲದಿದ್ದರೆ–ಕವಿ ಮಹಲಿಂಗರಂಗನ ವಾಣಿಯನ್ನು ಗಮನಿಸೋಣ–

ಏನ ಕಲಿತೊಡವೇನು ? ಯತ್ನದ
ಲೇನ ಮಾಡಿದೊಡೇನು ? ಸರ್ಗವು
ಕಾನನದ ಬೆಳದಿಂಗಳಂದದಿ
ವ್ಯರ್ಥವಾಗಿಹುದು ।
ಸ್ವಾನುಭವ ಸುಜ್ಞಾನವಿಲ್ಲದ
ಮಾನವನು ಬದುಕಿನೊಡವೇನವ
ಶ್ವಾನ ಸೂಕರನಂತೆ ಹೊಟ್ಟೆಯ
ಹೊರೆದು ಕೊಂಡಿಹನು ॥

ಸ್ವಾನುಭವವಿಲ್ಲದ ಮನುಷ್ಯನು ದನುಜನೇ ಸರಿ. ಸ್ವಾಧ್ಯಾಯವು ಒಂದು ವಿಧವಾದ ಅಧ್ಯಯನ. ಕಾರ್ಯ ಚಟುವಟಿಕೆಯಲ್ಲ. ಸಚ್ಚಿಂತನೆ ಅಷ್ಟೆ. ಇದು ನಮ್ಮ ಬಾಳಿನ ಒಂದು ಭಾಗವಾಗಿ ಸೇರಿಹೋಗಬೇಕು. ಇದಕ್ಕೆ ವಿಶೇಷ ಕಾಲಾವಕಾಶವೂ ಬೇಕಾಗಿಲ್ಲ. ಸತ್ಪಥದಲ್ಲಿ ಚಿಂತಿಸಲು ಸ್ವಾಧ್ಯಾಯದಲ್ಲಿ ದಿನವು ಕಾಲ ವಿನಿಯೋಗವಾದಾಗ, ಸ್ವಾಧ್ಯಾಯವೇ ಸ್ವಾನುಭವವಾಗಿ ಸತ್ಯದರ್ಶನ ಮಾಡಿಸುತ್ತದೆ. ಇದಕ್ಕೆ ಪ್ರಾರ್ಥನೆಯ ಬೀಜವನ್ನು ನೆಟ್ಟು, ಸತತ ಜಪವೆಂಬ ನೀರನ್ನು ಎರೆದು, ಪರಿಶುದ್ಧತೆಯ ಬೇಲಿಯನ್ನು ಕಟ್ಟಿ, ಅನಿಷ್ಟಗಳೆಂಬ ಕಳೆಗಳನ್ನು ಹೊರ ತೆಗೆದಾಗ ಆತ್ಮಾನುಭೂತಿ ಎಂಬ ಫಲವನ್ನು ಪಡೆಯಬಹುದು. ಧರ್ಮವೆಂದರೆ ಆತ್ಮ ಸಾಕ್ಷಾತ್ಕಾರ. ಇದು ಸ್ವಾಧ್ಯಾಯದಿಂದ ದೊರೆಯುವುದು.

ನಾವು ಆಭಾಸಗಳ ಕಂತೆ; ಇದನ್ನು ಅನುಕೂಲವಾದ ಗುಣಗಳಿಂದ ನಿಯಂತ್ರಿಸಬೇಕು. ಇಚ್ಛೆಗಳನ್ನು ತ್ಯಜಿಸಿದಾಗ ದಿವ್ಯ ಜೀವನಕ್ಕೆ ನಾಂದಿಯಾಗುತ್ತದೆ ಉಪಯುಕ್ತ ನುಡಿ, ಪ್ರೋತ್ಸಾಹಪೂರಕವಾದ ಹಾಸ್ಯ, ಸಹೃದಯ ಕಾರ್ಯ, ಮೃದುಭಾವ ಪ್ರೇಮಪೂರಿತ ಸತ್ಯವನ್ನಾಡಿದಾಗ ಉತ್ಕ್ರಾಂತಿಗೆ ಪ್ರವೇಶಿಸಿ ಸ್ವಾನುಭವ ಪಡೆಯುತ್ತೇವೆ. ಉತ್ಕ್ರಾಂತಿ ಎಂದರೆ ದಿವ್ಯತ್ವದಕಡೆ ನಡೆಯುವ ಪುನಃ ಪ್ರಯಾಣ. ಇದರ ತಳಹದಿಯೇ ಸ್ವಾಧ್ಯಾಯ ಟೊಳ್ಳು ಪಂಡಿತತನ ಸ್ವಾಧ್ಯಾಯದ ಸಂಪೂರ್ಣ ಫಲವನ್ನು ಪಡೆಯಲಾರದು. ಒಮ್ಮೆ ನಾಲ್ಕು ಜನ ಪಂಡಿತರು – ಆಯುರ್ವೇದ ವೈದ್ಯ, ಜ್ಯೋತಿಷಿ, ಗಾಯಕ ಮತ್ತು ತರ್ಕಶಾಸ್ತ್ರಜ್ಞ–ಇವರು ಒಂದು ಹಳ್ಳಿಯಲ್ಲಿ ತಂಗಬೇಕಾಯಿತು. ತಮ್ಮ ಊಟದ ವ್ಯವಸ್ಥೆಯಲ್ಲಿ ತೊಡಗಿದರು. ಆದರೇನು! ಇವರ ಬುದ್ಧಿಯೆಲ್ಲಾ ನಿತ್ಯಜೀವನದ ಸತ್ಯಕ್ಕೆ ಹೊಂದಲಾರದೆ ಊಟವನ್ನೇ ಮಾಡಲಿಲ್ಲ. ವೈದ್ಯ ತರಕಾರಿಗಳ ಗುಣಗಳನ್ನು ಚಿಂತಿಸಿ ತರಕಾರಿ ತರಲಿಲ್ಲ; ಜ್ಯೋತಿಷಿ ಕತ್ತೆ ಶಕುನ ಕೇಳಿ ಅಲ್ಲೇ ನಿಂತ; ಗಾಯಕ, ಅನ್ನದ ಮಡಿಕೆಯಲ್ಲಿ ಕುದಿಯುವ ಶಬ್ದವನ್ನು ಗಮನಿಸಿ ಅಪಸ್ವರ ಎಂದು ಒಡೆದು ಹಾಕಿದ. ತರ್ಕಪಂಡಿತ. ತುಪ್ಪ ತರುವಾಗ ತುಪ್ಪ ಬಟ್ಟಲಲ್ಲೋ, ಬಟ್ಟಲಲ್ಲಿ ತುಪ್ಪವೋ ಎಂದು ಚಿಂತಿಸುತ್ತ ನಿಂತು ತುಪ್ಪವನ್ನು ನೆಲಕ್ಕೆ ಸುರಿದು ಸಮಾಧಾನಪಟ್ಟುಕೊಂಡ. ಬರೀ ಪಾಂಡಿತ್ಯದಿಂದ ಪ್ರಯೋಜನವೇನು? ನಿಜವಾದ ಜ್ಞಾನ ಸ್ವಾಧ್ಯಾಯದಿಂದ ಬರುತ್ತದೆ. ಸ್ವಾಧ್ಯಾಯವು ನಮ್ಮ ಜೀವನದಲ್ಲಿ ಪ್ರತಿಯೊಂದು ಅನುಭವದ ಗುರುತನ್ನೂ ಬಿಟ್ಟು ಹೋಗುತ್ತದೆ. ಈ ಗುರುತು ಕಾಲಕ್ರಮೇಣ ವಾಸನೆಗೆ (ದೇಹವಾಸನೆ, ಲೋಕವಾಸನೆ, ಶಾಸ್ತ್ರವಾಸನೆ) ತಕ್ಕಂತೆ ರೂಪ ತಳೆದು ಪರಿವರ್ತನೆಗೊಳ್ಳುತ್ತದೆ. ಧರ್ಮಸೂತ್ರಗಳ ನಿತ್ಯ ಅಧ್ಯಯನವೇ ಆತ್ಮ ಚಿಂತನೆಯ ವಿಚಾರ ಸರಣಿ! ಸ್ವಾಧ್ಯಾಯವನ್ನು ಮಾಡದಿದ್ದಾಗ ಸುಂದರವಾದ ಜಗತ್ತು ಸುಂದರವಾಗಿ ಕಾಣದೆ ಅವಲಕ್ಷಣವಾಗಿ ಕಂಡು ಆನಂದ ಪಡುವುದರ ಬದಲು ದುಃಖಕ್ಕೆ ಒಳಗಾಗುತ್ತೇವೆ.

ಆಧ್ಯಾತ್ಮಿಕ ಜೀವನಕ್ಕೆ ಬೇಕಾದ ಬೆಲೆ ತೆರಲು ಸಿದ್ಧರಿದ್ದರೆ ಮಾತ್ರ ದಿವ್ಯ ಜೀವನ ಸಾಧ್ಯ! ಸತ್ ಚಿಂತನಾಭ್ಯಾಸ ಬೆಳೆಸಿದಾಗ ಪ್ರಲೋಭನೆಗಳು ತೊಲಗುತ್ತವೆ. ನಾವು ಸದಾ ಸ್ವಾಧ್ಯಾಯದ ಕಡೆಗೆ ನುಗ್ಗಿ ಹೋಗುವ ಮನಸ್ಥಿತಿಯಲ್ಲಿರಬೇಕು. ಗಾಢ ವ್ಯಾಕುಲತೆಬೇಕು. ಪರಿಸರವನ್ನು ದೂರಿ ಪ್ರಯೋಜನವಿಲ್ಲ. ನಮಗಾಗಿ ಜಗತ್ತೇ ಬದಲಾಯಿಸಲಾರದು. ನಮ್ಮಲ್ಲಿ ನಾವು ಬದಲಾಯಿಸಿಕೊಳ್ಳಬೇಕು. ಜನ ದೂರುತ್ತಲೂ ಇರುತ್ತಾರೆ, ದೂರುಗಳ ಕಾರಣಗಳನ್ನು ಮುಂದುವರಿಸಿಕೊಂಡು ಹೋಗುತ್ತಲೂ ಇರುತ್ತಾರೆ. ಇದನ್ನು ಸಮತೋಲನದಿಂದ ನಿವಾರಿಸಿಕೊಳ್ಳಲು ಯತ್ನಿಸಬೇಕು. ಭಗವದ್ಕೃಪೆ ಸ್ವಪ್ರಯತ್ನದ ರೂಪದಲ್ಲಿ ಬರುತ್ತದೆ. ಪ್ರಲೋಭನೆಗಳು ಮಾನಸಿಕವೇ, ಪ್ರಲೋಭನೆಗೊಳಿಸುವ ಎಲ್ಲ ವ್ಯಕ್ತಿಗಳನ್ನೂ ದೂರವಿಡುವುದು ಒಳ್ಳೆಯದು. ಹನಿ ಪ್ರೀತಿಗೆ ಧಾವಿಸಿ, ಮಣ ದುಃಖಕ್ಕೆ ಒಳಗಾಗುವುದು ಶ್ರೇಯವಲ್ಲ. ನಮ್ಮ ದುಃಖದ ಹಲವಾರು ಕಾರಣಗಳಲ್ಲಿ ಮೂರ್ಖರ ಸಲಹೆಗೆ ಕಿವಿಗೊಡುವುದು, ಜೊತೆಗೆ ಹಗುರ ಮನಸ್ಸಿನ ಮುಂದಿಯ ಹೆದರಿಕೆಗಾಗಿ ಆಧ್ಯಾತ್ಮಿಕ ಜೀವನದ ಅಮೂಲ್ಯ ಸಂಪತ್ತನ್ನು ಕಳೆದುಕೊಳ್ಳುವುದು ಒಳ್ಳೆಯದಲ್ಲ.

ನಮ್ಮ ಬಯಕೆಗಳನ್ನು ಆಧ್ಯಾತ್ಮೀಕರಿಸೋಣ. ನಮ್ಮ ಸ್ವಾಧ್ಯಾಯದ ಅಭ್ಯಾಸವು – ಪ್ರಾಪಂಚಿಕ ವಸ್ತುಗಳಲ್ಲಿ ಅವಿವೇಕಿಗಳಿಗೆ ಯಾವ ಗಾಢ ಪ್ರೀತಿ ಇರುತ್ತದೆಯೋ–ಅಷ್ಟೇ ಗಾಢ ಪ್ರೀತಿಯಿಂದ ಸಾಧ್ಯವನ್ನು ಸ್ಮರಿಸುವಂತಾದರೆ – ಅಂತಹ ಅಧ್ಯಯನವು ನಮ್ಮ ಹೃದಯದಿಂದ ಎಂದಿಗೂ ದೂರವಾಗುವುದಿಲ್ಲ.

# ತಿ. ತಿ. ದೇವಸ್ಥಾನಗಳು, ತಿರುಪತಿ.
# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

### ಕನ್ನಡ :

| | |
|---|---|
| ಶ್ರೀನಿವಾಸನ ಹಾಡುಗಳು-ಭಾಗ-2 (ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಕನಕದಾಸರು) | 4–50 |
| ಸೃಷ್ಟಿಪ್ರಕರಣ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ) –ವಿ. ಬಾದರಾಯಣ ಮೂರ್ತಿ | 12–50 |
| ಪುರಂದರೋಪನಿಷತ್ (ಪುರಂದರದಾಸರ ಏಳುಕೃತಿ ವಿವರಣೆ) –ಬನ್ನಂಜೆ ಗೋವಿಂದಾಚಾರ್ಯ | 7–00 |
| ಕೇಶವಾದಿ ರೂಪಗಳು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾಚಾರ್ಯ | 3–75 |
| ಕರ್ನಾಟಕ ಹರಿದಾಸರು(ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾಚಾರ್ಯ | 2–25 |
| ಗೀತಾಸಾರೋದ್ಧಾರ –ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳು | 4–00 |
| ಸ್ತೋತ್ರ ಕುಸುಮಮಾಲಾ –ಸಂ. ವೆಂಕಟಾಚಲ | 3–00 |
| ಶ್ರೀ ವೆಂಕಟೇಶ್ವರ ಸುಪ್ರಭಾತ, ತ್ರಿವರ್ಣಚಿತ್ರ ವಿವರಣೆ | 10–00 |
| ಆಚಾರಗಳು ಆಡಂಬರಗಳು ––ಕೆ. ಚಂದ್ರಮೌಳಿ | 0–40 |
| ಶ್ರೀ ವೆಂಕಟೇಶ್ವರ ಸುಪ್ರಭಾತ (ವಿವರಣೆ ತಾತ್ಪರ್ಯ) | 0–50 |
| ” (ಕನ್ನಡ ಲಿಪಿಯಲ್ಲಿ) | 0–12 |

**ಮಕ್ಕಳಿಗಾಗಿ :**

| | | |
|---|---|---|
| ಶ್ರೀಪಾದರಾಜರು | –ಎಂ. ಎಸ್. ಗುಂಡೂರಾವ್ | 0–75 |
| ಮಹಿಪತಿದಾಸರು | –ಶಾನಭಾಗ | 0–85 |
| ಪ್ರಸನ್ನ ವೆಂಕಟದಾಸರು | –ವಿ. ಬಾದರಾಯಣಮೂರ್ತಿ | 0–80 |
| ಗೋಪಾಲದಾಸರು | –ರುಕ್ಮಿಣಿಗಿರಿಮಾಜಿ | 0–75 |

### ಹಿಂದಿ :

| | |
|---|---|
| ಶ್ರೀ ವೆಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ –ಡಾ॥ ಎಂ. ಸಂಗಮೇಶಂ | 0–20 |
| ಶ್ರೀ ವೆಂಕಟೇಶ್ವರ ಸುಪ್ರಭಾತ್ (ಸಚಿತ್ರ) | 11–00 |
| ತೀರ್ಥರಾಜ ತಿರುಪತಿ ಡಾ॥ ಎಂ. ಸಂಗಮೇಶಂ | 1–50 |

### ಸಂಸ್ಕೃತ :

| | |
|---|---|
| ಶ್ರೀ ವೇಂಕಟೇಶ್ವರ ಸುಪ್ರಭಾತಂ | 0–12 |
| ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾಣಿ | 0–62 |
| ಕಠೋಪನಿಷತ್ –ಡಾ॥ ಕೆ ಸಿ. ವರದಾಚಾರಿ ಹಾಗೂ ಡಾ॥ ಡಿ. ತಾತಾಚಾರ್ಯ | 15–00 |
| ಮಾರ್ಕಂಡೇಯ ಸಂಹಿತಾ | 18–00 |
| ತತ್ತ್ವಸಂಖ್ಯಾನಂ –ಆರ್. ರಾಮಮೂರ್ತಿ ಶರ್ಮಾ | 2–00 |
| ಬ್ರಹ್ಮಸೂತ್ರ ಭಾಷ್ಯ (ಭಾಗ–1) –ಆರ್. ರಾಮಮೂರ್ತಿ ಶರ್ಮಾ | 30–00 |
| ಅಲಂಕಾರ ಸಂಗ್ರಹ ಸಂ–ಕೆ. ಭಾಸ್ಕರರಾವ್ | 16–00 |
| ಸೀತಾರಾಮಾಂಜನೇಯಂ –ಡಾ॥ ಡಿ. ಅರ್ಕಸೋಮಯಾಜಿ | 50–00 |
| ಪ್ರಶ್ನೋಪನಿಷತ್ | 11–00 |
| ಶ್ರೀಮತ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರಃ –ಸಂ ಡಾ॥ ಎಸ್.ಬಿ. ರಘುನಾಥಾಚಾರ್ಯ | 25–00 |

1000 ರೂಗಳನ್ನು ಮೀರಿದ ಪುಸ್ತಕಗಳ ಕೊಳ್ಳುವಿಕೆಗೆ 30% ರಿಯಾಯಿತಿಯೂ, 500 ರೂಗಳಿಂದ 1000 ರೂ॥ 25% ರಿಯಾಯಿತಿಯೂ 100 ರೂ ಗಳಿಂದ 500 ರೂ ವರೆಗೆ 15% ರಿಯಾಯಿತಿಯೂ ಉಂಟು. ಅಂಚೆವೆಚ್ಚ ಪ್ರತ್ಯೇಕ.

ಕೂಡಲೇ ಬರೆಯಿರಿ :

ಸೇಲ್ಸ್‌ವಿಂಗ್ ಆಫ್ ಪಬ್ಲಿಕೇಷನ್ಸ್,
ತಿ. ತಿ. ದೇ. ತಿರುಪತಿ.

# ಪ್ರಾಚೀನ ನ್ಯಾಯ ಶಾಸ್ತ್ರಗಳು

ವಿದ್ವಾನ್ ಬ. ನ. ಗುಂಡೂರಾವ್

ಭಾರತೀಯ ಮನೀಷಿಗಳು ಜಗತ್ಕಲ್ಯಾಣಕ್ಕಾಗಿ ಕೇವಲ ಪುರಾಣ ಗ್ರಂಥಗಳನ್ನು ಮಾತ್ರ ಬರೆದು, ಆದರ್ಶ ಮಹಾಪುರುಷರ ಪುಣ್ಯ ಕಥೆಯನ್ನು ಮತೀಯ ಸಾಹಿತ್ಯವಾಗಿ ಕೊಟ್ಟು ಹೋಗಿದ್ದಾರೆಂಬುದು ಸ್ಪಷ್ಟವಾಗಿದ್ದರೂ ಸಹ, ಆ ಗ್ರಂಥಗಳಲ್ಲೇ ಸತ್ಯ ಧರ್ಮ ನ್ಯಾಯಗಳ ನಿರೂಪಣೆ ಇಲ್ಲವೆಂದು ಹೇಳಲಾಗದು. ಸುಮೀಪವಾದ ರಚನೆಗೆ ಅತ್ಯಗತ್ಯವಾದ ಶಾಸ್ತ್ರಗ್ರಂಥಗಳ ಸಂಖ್ಯೆ ಭಾರತೀಯ ಪ್ರಾಚೀನ ಸಾಹಿತ್ಯದಲ್ಲಿ ಕಡಿಮೆ ಏನಿಲ್ಲ. ಈ ವಿಭಾಗವೂ ಸಹ ಸಾಕಷ್ಟು ಶ್ರೀಮಂತವಾಗಿದೆ.

ಭಗವಾನ್ ಯಾಜ್ಞವಲ್ಕ್ಯರ ಪ್ರಕಾರ ನ್ಯಾಯಶಾಸ್ತ್ರಕ್ಕೆ ಮೂಲಾಧಾರವಾದದ್ದು ಶ್ರುತಿ ಸ್ಮೃತಿಗಳು. ಶ್ರುತಿ ಎಂದರೆ, ವೇದಗಳು ಸ್ಮೃತಿ ಅಥವ ಧರ್ಮಶಾಸ್ತ್ರ ವೆಂದರೆ ನ್ಯಾಯ ಸಂಹಿತೆ. ಇದಕ್ಕೆ ಧರ್ಮಸೂತ್ರವೆಂದೂ ಹೆಸರುಂಟು. ವೇದಗಳಲ್ಲಿ ವಿಧಿವಾಕ್ಯಗಳು – ನಿಷೇಧವಾಕ್ಯಗಳೆಂದು ವಿಭಾಗವಿದೆ. ಇಷ್ಟೆಲ್ಲ ಜ್ಞಾನ ಕಣಜವಾಗಿದ್ದರೂ ಸಹ ವೇದಗಳನ್ನು ನೇರವಾಗಿ ನ್ಯಾಯ ಶಾಸ್ತ್ರವೆಂದು ಪರಿಗಣಿಸಲಾಗದು – ಎಂದು ಭಗವಾನ್ ಆಪಸ್ತಂಬರು ಅಭಿಪ್ರಾಯ ಪಡುತ್ತಾರೆ. ಆಧುನಿಕ ಸಿವಿಲ್ ಹಾಗೂ ಕ್ರಿಮಿನಲ್ ನ್ಯಾಯಸೂತ್ರಗಳಿಗೆ ಮೂಲಾಧಾರವೂ–ಮೂಲ ಪ್ರೇರಣೆಯೂ ಆಗಿರುವಂತಹ ಸ್ಮೃತಿ ಅಥವ ಧರ್ಮ ಸೂತ್ರಗಳನ್ನು ಮಾತ್ರ ಪ್ರಾಚೀನ ಭಾರತದ ನ್ಯಾಯ ಶಾಸ್ತ್ರಗ್ರಂಥಗಳೆಂದು ಪರಿಗಣಿಸಬೇಕಾಗುತ್ತದೆ.

ಯಾಜ್ಞವಲ್ಕ್ಯರು ತಮ್ಮನ್ನೂ ಸೇರಿಸಿಕೊಂಡು ಸುಮಾರು ಇಪ್ಪತ್ತು ಜನ ಸ್ಮೃತಿಕಾರರನ್ನು ಉಲ್ಲೇಖಿಸುತ್ತಾರೆ. ಇವರೇ ನ್ಯಾಯ ಶಾಸ್ತ್ರಗಳನ್ನು ಕೊಟ್ಟ ವಿದ್ವನ್ಮಣಿಗಳು. ಮನು–ಅತ್ರಿ–ಹಾರೀತ–ವಿಷ್ಣು – ಯಾಜ್ಞವಲ್ಕ್ಯ – ಉಶನಸ–ಅಂಗೀರಸ–ಆಪಸ್ತಂಬ–ಸಂವರ್ತ–ಕಾತ್ಯಾಯನ–ಬೃಹಸ್ಪತಿ–ಪರಾಶರ–ವ್ಯಾಸ–ದಕ್ಷ–ಶಂಖ–ಲಿಖಿತ ಗೌತಮ – ವಸಿಷ್ಠ – ಬೋಧಾಯನ – ಯಮ– ಇವರು ಪ್ರಧಾನ ಸ್ಮೃತಿಕಾರರು.

ವೇದಗಳಲ್ಲಿ ಬಂದಿರುವ ಧರ್ಮಸಿದ್ಧಾಂತಗಳು, ನಾನಾ ಶಾಖೆಗಳಲ್ಲಿ ಹಂಚಿ ಹೋಗಿರುವ ಧರ್ಮ ಸೂತ್ರಾಂಶಗಳು ತತ್ಕಾಲೀನ ಸಮಾಜದ ಸಂಪ್ರದಾಯಗಳು, ಅಧಿಕೃತವಾಗಿ ಆಚರಣೆಯಲ್ಲಿದ್ದ ಪದ್ಧತಿಗಳು – ಇತ್ಯಾದಿ ನಾನಾ ವಿಷಯಗಳನ್ನು ಸ್ಮೃತಿ ಕಾರರು ಅಚ್ಚುಕಟ್ಟಾಗಿ, ಬೇರೆ ಬೇರೆ ಶಿರೋನಾಮೆಗಳಲ್ಲಿ ವಿಂಗಡಿಸಿ, ಖಚಿತವಾದ ಶೈಲಿಯಲ್ಲಿ ಬರೆದಿದ್ದಾರೆ. ನ್ಯಾಯಗಳು–ಅದರ ರಚನೆ–ಅದರ ವಿವಿಧ ಹಂತಗಳು – ನ್ಯಾಯಮೂರ್ತಿಗಳ ನೇಮಕಾತಿ ಮತ್ತು ಅವರಿಗೆ ಅಗತ್ಯವಾದ ವಿದ್ಯಾರ್ಹತೆ–ಇತ್ಯಾದಿ ವಿಷಯಗಳು ಸಹ ಸ್ಮೃತಿಗಳಲ್ಲಿವೆ.

ಇಲ್ಲಿ ಮೀಮಾಂಸ ಶಾಸ್ತ್ರದ ಬಗ್ಗೆ ವಿವರಣೆ ಕೊಡುವುದು ಅಪ್ರಾಸಂಗಿಕವಲ್ಲ. ಧರ್ಮ ಸೂತ್ರಗಳನ್ನು–ಸ್ಮೃತಿ ವಾಕ್ಯಗಳನ್ನು – ಅವು ನ್ಯಾಯ ಶಾಸ್ತ್ರಕ್ಕೆ ಸಂಬಂಧ ಪಟ್ಟಿರುವುದರಿಂದ – ಹೇಗೆ ವ್ಯಾಖ್ಯಾನಿಸಬೇಕು–ಅದರ ಅರ್ಥವ್ಯಾಪ್ತಿಯನ್ನು ಹೇಗೆ ನಿರ್ಣಯಿಸಬೇಕು–ಎಂಬುದು ಮೀಮಾಂಸಾ ಶಾಸ್ತ್ರದ ಮುಖ್ಯವಸ್ತುವಾಗಿರುತ್ತದೆ. ಈ ಶಾಸ್ತ್ರದ ಸಮುನ್ನತ ಪ್ರಖರ ಪ್ರತಿಭೆಯ ಸಮುಜ್ವಲ ನಿದರ್ಶನ–ಜೈಮಿನಿಯ ಪೂರ್ವಮೀಮಾಂಸೆ. ಅದಕ್ಕೆ ಶಬರ ಸ್ವಾಮಿ ಬರೆದ ವ್ಯಾಖ್ಯಾನ, ಕುಮಾರಿಲ ಭಟ್ಟನ ತಂತ್ರವಾರ್ತಿಕ ಇತ್ಯಾದಿ ಗ್ರಂಥಗಳು– ನ್ಯಾಯಸೂತ್ರ ವ್ಯಾಖ್ಯಾನ ಕೌಶಲದ ಬಗ್ಗೆ ಸಾಕಷ್ಟು ಬೆಳಕು ಚೆಲ್ಲುತ್ತವೆ. ಮೀಮಾಂಸಾ ಶಾಸ್ತ್ರವು, ನ್ಯಾಯಶಾಸ್ತ್ರನೇತ್ರರಿಗೆ, ನ್ಯಾಯವನ್ನು ಸನ್ನಿವೇಶಾನುಕೂಲವಾಗಿ ಹಿಗ್ಗಿಸುವುದಕ್ಕೆ –ಕುಗ್ಗಿಸುವುದಕ್ಕೆ ಸಾಕಷ್ಟು ಅವಕಾಶ ಮಾಡಿಕೊಟ್ಟಿದೆ.

ವಿಜ್ಞಾನೇಶ್ವರನ ಮಿತಾಕ್ಷರ, ಜೀಮೂತವಾಹನನ ದಾಯಭಾಗ, ದೇವಣ್ಣ ಭಟ್ಟನ ಸ್ಮೃತಿ ಚಂದ್ರಿಕಾ, ಚಂಡೇಶ್ವರನ ವಿವಾದ ರತ್ನಾಕರ, ಮಾಧವಾಚಾರ್ಯನ ಪರಾಶರ ಮಾಧವೀಯ, ವಾಚಸ್ಪತಿ ಮಿಶ್ರನ ವಿವಾದ ಚಿಂತಾಮಣಿ, ಪ್ರತಾಪ ರುದ್ರದೇವನ ಸರಸ್ವತೀ ವಿಲಾಸ, ರಘುನಂದನನ ದಾಯತತ್ತ್ವ; ವರದರಾಜನ ವ್ಯವಹಾರ ನಿರ್ಣಯ, ನೀಲಕಂಠ ಭಟ್ಟನ ವ್ಯವಹಾರ ಮಯೂಖ, ಮಿತ್ರಮಿಶ್ರನ ವೀರ ಮಿತ್ರೋದಯ, ಕಮಲಾಕರನ ನಿರ್ಣಯಸಿಂಧು, ಅಪರಾರ್ಕನ ಯಾಜ್ಞವಲ್ಕ್ಯ ಧರ್ಮಶಾಸ್ತ್ರ, ನಂದ ಪಂಡಿತನ ದತ್ತಕ ಮೀಮಾಂಸ, ಕುಬೇರನ ದತ್ತಕ ಚಂದ್ರಿಕಾ, ಶ್ರೀಕೃಷ್ಣ ತರ್ಕಾಲಂಕಾರನ ದಾಯ ಕರ್ಮ ಸಂಗ್ರಹ–ಇತ್ಯಾದಿ ಪ್ರಾಚೀನ ನ್ಯಾಯ ಶಾಸ್ತ್ರ ಗ್ರಂಥಗಳು–ಪಿತ್ರಾರ್ಜಿತ ಆಸ್ತಿಯಂತೆ–ಭಾರತೀಯರಿಗೆ ಅಮೂಲ್ಯವೂ ಹೌದು, ಮಹತ್ತ್ವಪೂರ್ಣವೂ ಹೌದು. ಇದರಿಂದಾಗಿ ಭಾರತೀಯ ನ್ಯಾಯಪದ್ಧತಿ ಇಡೀ ಜಗತ್ತಿನಲ್ಲೇ ಅತ್ಯಂತ ಪ್ರಾಚೀನವೆಂದು ಮಾನ್ಯವಾಗಿದೆ. ಕೆಲವು ಗ್ರಂಥಗಳ ಸ್ಥೂಲ ಪರಿಚಯ ಹೀಗೆ ಕೊಡಬಹುದು.–

## ಗೌತಮ ಧರ್ಮ ಸೂತ್ರ

ಇದು ಅತ್ಯಂತ ಪ್ರಾಚೀನ ಧರ್ಮಸೂತ್ರ. ಗದ್ಯದಲ್ಲಿದೆ. ನ್ಯಾಯ ಹಾಗೂ ಇತರೆ ಧಾರ್ಮಿಕ ವಿಚಾರಗಳ ವಿಶದ ಪ್ರಸ್ತಾಪಮಾಡಲಾಗಿದೆ – ಮದುವೆ, ಸ್ತ್ರೀಧನ – ಆಸ್ತಿವಿಭಾಗ–ವ್ಯಾಪಾರ – ಬಡ್ಡಿವ್ಯವಹಾರ–ಮುಂತಾದ ವಿಷಯಗಳಲ್ಲಿ ಉದ್ಭವಿಸಬಹುದಾದ ನಾನಾಸಮಸ್ಯೆಗಳು ಹಾಗೂ ತತ್ಸಂಬಂಧವಾದ ನ್ಯಾಯೋಚಿತ ಪರಿಹಾರ ಹಾಗೂ ಸಂಬಂಧಪಟ್ಟ ಕಾನೂನುಗಳನ್ನು ಈ ಗ್ರಂಥದಲ್ಲಿ ನಮೂದಿಸಲಾಗಿದೆ.

## ಬೋಧಾಯನ ಧರ್ಮ ಸೂತ್ರ

ಇದು ಸಂಪೂರ್ಣವಾಗಿ ಉಪಲಬ್ಧವಾಗಿಲ್ಲ. ಸಿಕ್ಕಿರುವ ಭಾಗಗಳಲ್ಲಿ ದಶವಿಧ ಸಂತಾನ ಮತ್ತು ಅವರ ಹಕ್ಕುಗಳು, ಸೋದರಿಕೆಯ ಸಂಬಂಧ, ಹಾಗೂ ತೆರಿಗೆಗಳ ಬಗ್ಗೆ ಪ್ರಸ್ತಾಪವಿದೆ.

## ಆಪಸ್ತಂಬ ಧರ್ಮ ಸೂತ್ರ

ಈ ಗ್ರಂಥ ಸಂಪೂರ್ಣವಾಗಿ ಸಿಕ್ಕಿರುವುದೊಂದು ಪುಣ್ಯ. ಭಗವಾನ್ ಆಪಸ್ತಂಬರು ದಕ್ಷಿಣಭಾರತದವರು–ಆಂಧ್ರ ಪ್ರಾಂತ್ಯದವರು–ಎಂದು ಡಾ॥ ಬ್ಯೂಹ್ಲರ್ ಎಂಬ ಸಂಶೋಧಕ ಅಭಿಪ್ರಾಯಪಟ್ಟಿದ್ದಾನೆ. ಈತನ ಕಾಲ ಕ್ರಿ. ಶ. 3 ನೇ ಶತಮಾನ. ಗ್ರಂಥದ ಭಾಷೆ ಸ್ಪಷ್ಟ ಹಾಗೂ ಸಶಕ್ತವಾಗಿದೆ. ನಂತರದ ಶಾಸ್ತ್ರಕಾರರಿಗೆ ಈತ ಮಾರ್ಗದರ್ಶಕನಾಗಿದ್ದಾನೆ. ಈ ಸೂತ್ರಗ್ರಂಥಕ್ಕೆ ಹರದತ್ತ ಎಂಬಾತ – ಉಜ್ವಲ – ಎಂಬ ವ್ಯಾಖ್ಯಾನ ರಚಿಸಿದ್ದಾನೆ. ಪರಿಶುದ್ಧ ಜೀವಿಗಳೂ, ಅನುಭವಿಗಳೂ ಆದ ಮಹನೀಯರ ಅಭಿಪ್ರಾಯಗಳನ್ನು– ಅವರು ಯಾವುದೇ ಕೋಮು, ಪಂಗಡದವರಾಗಿರಲಿ–ವಿವಾದಾಸ್ಪದ ವಿಷಯಗಳನ್ನು ನ್ಯಾಯಸಮ್ಮತವಾಗಿ ನಿರ್ಣಯ ಮಾಡುವಾಗ–ಮಾನ್ಯಮಾಡಿ

## ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನ ಗಳನ್ನು, ಕವನ, ಕೀರ್ತನೆ, ಭಾವ ಛಾಯಾ ಚಿತ್ರಗಳನ್ನು ಕಳುಹಿಸಬಯಸು ವವರು ಕೆಳಗಣ ಸೂಚನೆಗಳನ್ನು ಗಮ ನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯ ಗಳ ಬರಹಗಳು ತತ್ಸಂಬಂಧಿ ಫೋಟೋ ಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿ ನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟ ವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸ ಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಆಧಾರವಾಗಿಟ್ಟು ಕೊಳ್ಳತಕ್ಕದ್ದು ಎಂಬ ಸುಂದರ ಅಭಿಪ್ರಾಯವನ್ನು ಸೂಚಿಸಿರುವ. ಆಪಸ್ತಂಬರ ಉದಾರ ಮನೋಭಾವ-ಎಲ್ಲ ಕಾಲಕ್ಕೂ ಅವ ರನ್ನು ಗೌರವಾನ್ವಿತಗೊಳಿಸಿದೆ. ವೇದವೇ ನ್ಯಾಯಶಾಸ್ತ್ರವಲ್ಲ ... ನ್ಯಾಯದ ಬಗ್ಗೆ ವೇದ ದಲ್ಲಿ ಸೂಚನೆಯಿವೆ ಎಂಬ ಈ ವಿದ್ವಾಂಸ ನಿನೂತನ ವಿಚಾರ ಧಾರೆಯು ಕ್ರಾಂತಿಕಾರಿ ವ್ಯಕ್ತಿ. ಇಲ್ಲಿ-ಕ್ರಾಂತಿಕಾರಿ-ಎಂದರೆ ಆಧುನಿಕ ರಾಜಕೀಯ ಅರ್ಥವಿಲ್ಲ. ಮತ್ತು ಸಂತಾನ ವಿಕ್ರಯ.ಪಾದ್ದರಿಂದ ಆಪಸ್ತಂಬರು. ಮತ್ತು ಪತ್ನಿ ಯನ್ನು ಮಾರುವುದಿಲ್ಲ. ತತ್ಸಂಬಂಧ ವಾದ ವೇದ ಮಂತ್ರಗಳಿಗೆ ಅನುಕೂಲಕ್ಕ ಅಗತ್ಯಕ್ಕೆ ತಕ್ಕಂತೆ ಅರ್ಥಕಲ್ಪಿಸಲಾಗಿದೆ ಎಂದು ಇವರ ಅಭಿಪ್ರಾಯ.

### ಹಾರೀತ ಧರ್ಮಸೂತ್ರ

ಪ್ರಾಗ್‌ನ್ಯಾಯ Res judicata ಎಂಬ ವಿನೂತನ ವಿಚಾರ ಧಾರೆಯನ್ನು ಕೊಟ್ಟು ಹಾರೀತ ನ್ಯಾಯಾಲಯದ ತೀರ್ಪಿನ ಸಾರ್ವಭೌಮ ತೆಯ, ರಾಷ್ಟ್ರಾದ್ಯಂತ ಒಂದು ನಿರ್ದಿಷ್ಟ ನ್ಯಾಯ ವನ್ನು ಜಾರಿಗೊಳಿಸಲು ಸೂಕ್ತವಾತಾವರಣ ಕಲ್ಪಿಸುವಂತಿರಬೇಕು - ಎಂಬ ವಿಚಾರವನ್ನು ವಿಪುಲವಾಗಿ ಪ್ರಸ್ತಾಪ ಮಾಡಿದ್ದಾರೆ. ಈ ಗ್ರಂಥ ದಲ್ಲಿ.

### ವಾಸಿಷ್ಠ ಧರ್ಮಸೂತ್ರ

ಈ ಗ್ರಂಥ ಪ್ರಾರಂಭದಲ್ಲಿ ಗದ್ಯ ಮುಕ್ತಾಯ ದಲ್ಲಿ ಶ್ಲೋಕ ರೂಪದಲ್ಲಿರುವ ವಿಷ್ಣು ಧರ್ಮಸೂತ್ರ ಕ್ಕಿಂತ ಅನೇಕ ಬಾಬುಗಳಲ್ಲಿ ಭಿನ್ನವಾಗಿದೆ. ಪೂರ್ವಾಚಾರ ಪದ್ಧತಿಗಳು ನ್ಯಾಯಕ್ಕೆ ಪೂರಕ ಗಳು ಎನ್ನುವ ಈ ಗ್ರಂಥ ದತ್ತು ಪದ್ಧತಿಯನ್ನು ಮಾನ್ಯಮಾಡುತ್ತದೆ.

### ವಿಷ್ಣು ಧರ್ಮಸೂತ್ರ

ನಂದ ಪಂಡಿತ ಎಂಬಾತ ಇದಕ್ಕೆ - ವಿಜಯಂತ ಎಂಬ ಹೆಸರಿನ್ನ ವಿಪುಲ ವ್ಯಾಖ್ಯಾನ ಗ್ರಂಥ ರಚಿ ಸಿದ್ದಾನೆ. ಇದನ್ನು ಡಾ॥ ಜೋಲಿ ಎಂಬಾತ ಇಂಗ್ಲಿಷಿಗೆ ಅನುವಾದ ಮಾಡಿದ್ದಾನೆ.

### ಪರಾಶರ ಸ್ಮೃತಿ

ಕಲೌ ಪಾರಾಶರಸ್ಮೃತಿಃ ಎಂಬ ಗಾದೆ ಯುಂಟು. ಕಲಿಯುಗದಲ್ಲಿ ಪರಾಶರ ಸ್ಮೃತಿಗೇ ಹೆಚ್ಚು ಮಾನ್ಯತೆ. ಭಾರತೀಯ ನ್ಯಾಯಶಾಸ್ತ್ರ ಕಾರರಲ್ಲಿ ಸ್ಮೃತಿಕಾರ ಪರಾಶರ ಅತ್ಯಂತ ಗೌರ ವಾನ್ವಿತ ವಿದ್ವನ್ಮಣಿ. ಭಗವಾನ್ ಯಾಜ್ಞವಲ್ಕ್ಯರು ಸಹ ಈತನನ್ನು ಶ್ರದ್ಧಾ ಭಕ್ತಿಗಳಿಂದ ಸ್ಮರಿಸುತ್ತಾರೆ. ಈ ಗ್ರಂಥ ಸಂಪೂರ್ಣವಾಗಿ ದೊರೆತಿಲ್ಲ. ಅಪರಾರ್ಕ ವಿಜ್ಞಾನೇಶ್ವರ ಮುಂತಾದ ಪ್ರಖ್ಯಾತ ಟೀಕಾ ಕಾರರು ಪರಾಶರ ಸ್ಮೃತಿಯನ್ನು ವಿಶೇಷವಾಗಿ ಉದಾಹರಿಸುತ್ತಾರೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಸಹ ಈ ಸ್ಮೃತಿಯ ಬಗ್ಗೆ ಉಲ್ಲೇಖವಿದೆ ಪರಾಶರ ಸ್ಮೃತಿಯಲ್ಲಿ ಆಚಾರ ಮತ್ತು ಪ್ರಾಯಶ್ಚಿತ್ತ ಎಂಬ ಭಾಗವನ್ನಾತ್ರ ಸಿಕ್ಕಿದೆ-592 ಶ್ಲೋಕಗಳಲ್ಲಿ ಪರಕೀಯರ ಧಾಳಿ ಪ್ರಯಾಣ, ಘೋರವಿಪತ್ತು ಗಳು-ಇತ್ಯಾದಿ ವಿಶೇಷ ಸಂದರ್ಭಗಳಲ್ಲಿ ಕೆಲವು ಧಾರ್ಮಿಕ ಆಚಾರವ್ಯವಹಾರಗಳನ್ನು ಕಟ್ಟು ನಿಟ್ಟಾಗಿ ಪಾಲಿಸಲು ಅವಕಾಶವಾಗುವುದಿಲ್ಲವಾದ್ದ ರಿಂದ ವಿನಾಯಿತಿ, ಮತ್ತು ಪ್ರಾಯಶ್ಚಿತ್ತಗಳನ್ನು ಈ ಗ್ರಂಥದಲ್ಲಿ ಸೂಚಿಸಲಾಗಿದೆ. ಆದರೆ ಸಾಮಾನ್ಯ ಸ್ಥಿತಿಯಲ್ಲಿ ಆಚಾರವನ್ನು ಪಾಲಿಸಲೇ ಬೇಕೆಂದು ಪರಾಶರಸ್ಮೃತಿ ಹೇಳುತ್ತದೆ. ವಿಜಯ ನಗರದ ಸಂಸ್ಥಾನದ ಕಾಲದಲ್ಲಿ ಹೆಸರುವಾಸಿ ಯಾಗಿದ್ದ - ಮಾಧವಾಚಾರ್ಯನು - ಈ ಸ್ಮೃತಿ ಗ್ರಂಥಕ್ಕೆ-ಪರಾಶರ ಮಾಧವೀಯ-ಎಂಬ ಟೀಕು ರಚಿಸಿದ್ದಾನೆ. ಪರಾಶರ ಸ್ಮೃತಿಯು ಮನು ಮತ್ತು ಯಾಜ್ಞವಲ್ಕ್ಯರಿಗಿಂತಲೂ ಮುಂಚೆಯೇ ರಚಿತ ವಾಗಿದೆ ಎಂಬುದರಲ್ಲಿ ಸಂದೇಹವಿಲ್ಲ.

### ಮನು ಸ್ಮೃತಿ

ಪ್ರಾಚೀನ ಭಾರತದ ನ್ಯಾಯಶಾಸ್ತ್ರಗಳಲ್ಲಿ ಇದಕ್ಕೆ ಅತ್ಯಂತ ಮಹತ್ತ್ವವಿದೆ. ಕ್ರಿ. ಶ 2 ನೇ ಶತಮಾನ ಮತ್ತು ಅನಂತರದ ನ್ಯಾಯಶಾಸ್ತ್ರ ಪರಿಣತರೆಲ್ಲರೂ ಈ ಸ್ಮೃತಿಗೆ ವಿಶೇಷ ಗೌರವ ನೀಡುವುದೇ ಅಲ್ಲದೆ ಇದನ್ನು ಅತ್ಯಂತ ಪ್ರಾಮಾ ಣಿಕ ವೆಂದೂ ಅಭಿಪ್ರಾಯಪಡುತ್ತಾರೆ. ಈ ಮನು ಧರ್ಮ ಶಾಸ್ತ್ರ ಕ್ರಿ. ಶ. 1 ನೇ ಶತಮಾನಕ್ಕೆ ಸಂ ಬಂಧಿಸಿದೆ ಎಂದು ಹಿರಿಯರ ಮತವುಂಟು. ಈ ಸ್ಮೃತಿಯನ್ನು ಈಗಿರುವ ಸ್ಥಿತಿಯಲ್ಲಿ ಜೋಡಣೆ ಮಾಡಿದಾತ ಭೃಗುಋಷಿ-ಎಂದು ಹೇಳಲಾಗು ತ್ತದೆ. ಈ ಜೋಡಣೆಯ ಕೆಲಸ ಕ್ರಿ. ಪೂ 200- ಕ್ರಿ. ಶ. 200 ರ ಮಧ್ಯೆ ಆಗಿರಬಹುದು. ಆದರೆ ಋಗ್ವೇದ ಕಾಲದಿಂದ ಮೊದಲ್ಗೊಂಡು-ಅನೇಕ ಧರ್ಮಶಾಸ್ತ್ರಕಾರರು ಮನುಸ್ಮೃತಿಯನ್ನು ಉಲ್ಲೇ ಖಿಸಿದ್ದಾರೆ ಮಾತ್ರವಲ್ಲ - ಈತನನ್ನು ಪ್ರಪ್ರಥಮ ನ್ಯಾಯಶಾಸ್ತ್ರವೇತ್ತನೆಂದು ಕೊಂಡಾಡಿದ್ದಾರೆ. ಮನು, ಸ್ವಾಯಂಭುವಮನು-ಸ್ವಾರೋಚಿಷಮನು -ವೃದ್ಧಮನು - ಪ್ರಾಚೇತಮನು ಹೀಗೆ ಅನೇಕ ಮನುಗಳು ಭಾರತೀಯ ಪರಂಪರೆಯಲ್ಲಿ ಬಂದಿ ದ್ದಾರೆ. ಹಾಗಾದರೆ ಈ ಸ್ಮೃತಿ ಗ್ರಂಥ ಬರೆದ

ವನು ಯಾರು? ಇವನ್ನು ಮನುಧರ್ಮಶಾಸ್ತ್ರವೆನ್ನುವುದಕ್ಕಿಂತ—ಮಾನವಧರ್ಮಶಾಸ್ತ್ರ — ಎಂಬ ಹೆಸರು ಅಧಿಕ ಸೂಕ್ತ. ಈ ಚರ್ಚೆ ಏನೇ ಇರಲಿ, ಇದರ ಸ್ಥಾನವಂತೂ ಸರ್ವೋನ್ನತವಾಗಿರುವುದು ಸತ್ಯ. ಮನುಸ್ಮೃತಿ 126 ಅಧ್ಯಾಯಗಳಲ್ಲಿದ್ದು 2694 ಶ್ಲೋಕಗಳಿಂದ ಕೂಡಿದೆ. ಈ ಸ್ಮೃತಿಗೆ 6 ಜನ ವಿದ್ವಾಂಸರು ವ್ಯಾಖ್ಯಾನ ರಚಿಸಿದ್ದಾರೆ. ಅವರ ಹೆಸರುಗಳು ಹೀಗಿದೆ.

| ಲೇಖಕ | ಟೀಕಾಗ್ರಂಥ |
|---|---|
| ಭಟ್ಟಮೇಧಾತಿಥಿ | ಮನುಭಾಷ್ಯ |
| ಗೋವಿಂದ ರಾಜ | ಮನುಟೀಕಾ |
| ಸರ್ವಜ್ಞನಾರಾಯಣ | ಮನ್ವರ್ಥವೃತ್ತಿ |
| ಕುಲ್ಲೂಕಭಟ್ಟ | ಮನ್ವರ್ಥಮುಕ್ತಾವಳಿ |
| ರಾಘವನಂದನ ಸರಸ್ವತಿ | ಮನ್ವರ್ಥಚಂದ್ರಿಕಾ |
| ನಂದನಾಚಾರ್ಯ | ಮನುವ್ಯಾಖ್ಯಾನ |

## ಯಾಜ್ಞವಲ್ಕ್ಯ ಸ್ಮೃತಿ

ಭಾರತೀಯ ನ್ಯಾಯಶಾಸ್ತ್ರ ಪರಂಪರೆಯಲ್ಲಿ ಅತ್ಯಂತ ಮಹತ್ತ್ವಪೂರ್ಣವಾದ ಸ್ಮೃತಿಗ್ರಂಥ ಇದು. ಮನುಸ್ಮೃತಿಗಿಂತಲೂ ಹೆಚ್ಚು ಖಚಿತ—ಹೆಚ್ಚು ವೈಜ್ಞಾನಿಕ—ಹೆಚ್ಚು ವಿಚಾರಪೂರ್ಣವಾಗಿದೆ. ಭಾರತೀಯರಿಗೆ ಮನುಸ್ಮೃತಿ ಗೌರವಾನ್ವಿತವಾದುದೆಂಬುದರಲ್ಲಿ ಸಂಶಯವಿಲ್ಲ. ಆದರೆ ಇಂದಿಗೂ ಭಾರತೀಯರನ್ನಾಳುತ್ತಿರುವುದು ಯಾಜ್ಞವಲ್ಕ್ಯ ಸ್ಮೃತಿಯೆ ಇದರಲ್ಲಿ 3 ಅಧ್ಯಾಯಗಳಿದ್ದು 1010 ಶ್ಲೋಕಗಳಿವೆ. ಇದಕ್ಕೆ ವಿಜ್ಞಾನೇಶ್ವರನೆಂಬಾತ—ಮಿತಾಕ್ಷರ—ಎಂಬ ಹೆಸರಿನ ವ್ಯಾಖ್ಯಾನ ಗ್ರಂಥ ಬರೆದಿದ್ದಾನೆ. ಇದರ ಆಧಾರದ ಮೇಲೆ ರಚಿತವಾದದ್ದೆ ಇಂದು ಬಳಕೆಯಲ್ಲಿರುವ Hindu Law —ಹಿಂದೂ ಲಾ. ಇದಕ್ಕೆ ಬಂಗಾಳದ ವಿನಃ ಉಳಿದೆಲ್ಲ ಭಾಗಗಳಲ್ಲೂ ಮಾನ್ಯತೆ ಇದೆ ಬಂಗಾಳದಲ್ಲಿ ಜಾರಿಯಲ್ಲಿರುವ ಹಿಂದೂ ಲಾ ದಾಯಭಾಗ—ಎಂಬ ಸಂಪ್ರದಾಯಕ್ಕೆ ಸಂಬಂಧಿಸಿದ್ದು.

## ನಾರದ ಸ್ಮೃತಿ

ಇದು ನ್ಯಾಯಾಲಯಕ್ಕೆ ಸಂಬಂಧಿಸಿದ ಅನೇಕ ವಿಚಾರಗಳನ್ನು ಗಹನವಾದ ರೀತಿಯಲ್ಲಿ ಪ್ರಸ್ತಾಪ ಮಾಡುವ ಗ್ರಂಥ. ವಾದ—ಪ್ರತಿವಾದ—ಮೌಖಿಕ ಲಿಖಿತ ದಾಖಲೆಗಳು—ಇತ್ಯಾದಿ ನಾನಾ ಅಂಶಗಳಿರುವ ಈ ಗ್ರಂಥದಲ್ಲಿ 1028 ಶ್ಲೋಕಗಳಿವೆ. ಬಾಣ ಭಟ್ಟ ತನ್ನ—ಕಾದಂಬರಿಯಲ್ಲಿ, ಈ ಸ್ಮೃತಿಕಾರನಿಂದಲೇ ರಚಿತವಾಗಿದೆಯೆಂದು ಹೇಳಲಾಗುವ ರಾಜ್ಯಶಾಸ್ತ್ರದ ಪ್ರಸ್ತಾಪಮಾಡಿದ್ದಾನೆ. ಈ ಸ್ಮೃತಿ ಸುಮಾರು ಕ್ರಿ.ಶ 300 ರಚಿತವಾಗಿರಬೇಕು. ಈ ಗ್ರಂಥದ ಲೇಖಕ ನಾರದ ಸಂಜಾತ ನೇಪಾಳದವನು. ಇದರಲ್ಲಿ [illegible] ದಲ್ಲಿ ಚಿಕ್ಕಮಗನೂ ಸಹ [illegible] ಇತರ ಕರ್ತೃಕ್ಕೆ ಕರ್ತನಾಗಬಹುದು. ಆಸ್ತಿ ಸ್ವಯಾರ್ಜಿತವಾಗಿದ್ದ ಪಕ್ಷದಲ್ಲಿ ತಂದೆ ತನಗೆರಡು ಭಾಗ ಉಳಿಸಿಕೊಂಡು ಉಳಿದ್ದನ್ನು ಮಕ್ಕಳಿಗೆ ಹಂಚಬೇಕು—ಕುಟುಂಬದ ಯಜಮಾನನ ಸತ್ತಮೇಲೆ ಮಕ್ಕಳಂತೆ ಹೆಂಡತಿಗೂ ಸಹ ಆಸ್ತಿಯಲ್ಲಿ ಸಮಾನಭಾಗವಿದೆ. ಅವಿವಾಹಿತ ಕನ್ಯೆಗೂ ತಂದೆಯ ಆಸ್ತಿಯಲ್ಲಿ ಭಾಗವುಂಟು—ಗಂಡ ಅಶಕ್ತನೂ ಅಥವ ತಲೆಮರೆಸಿಕೊಂಡು ಹೋದವನೂ ಆಗಿರುವಾಗ ಅಂತಹವನ ಪತ್ನಿಗೆ ಪುನಃ ಮದುವೆಯಾಗಲವಕಾಶವಿದೆ. ವಿಧವಾವಿವಾಹಕ್ಕೆ ಅವಕಾಶವಿದೆ. ಗಂಡನಿಂದ ಮಕ್ಕಳನ್ನು ಪಡೆಯದ ವಿಧವೆಯಾದಲ್ಲಿ—ಅವಳು ಬಯಸಿದರೆ ಇತರರಿಂದ ನಿಯೋಗ ಕ್ರಮದಲ್ಲಿ ಮಕ್ಕಳನ್ನು ಪಡೆಯಬಹುದು—ಪರವಾನಗಿ ಪಡೆದು ಸಾರ್ವಜನಿಕ ಸ್ಥಳದಲ್ಲಿ ಆಡುವ ಜೂಜು ಅಪರಾಧವಲ್ಲ. ಏಕೆಂದರೆ ಅದು ನ್ಯಾಯಬದ್ಧ ಮನರಂಜನೆಯಾಗಿರುತ್ತದೆ. ಪ್ರಾಪ್ತವಯಸ್ಸೆಂದರೆ ಗಂಡಿಗೆ 16 ವರ್ಷವಾಗಿರಲೇ ಬೇಕು. ಅಪ್ರಾಪ್ತ ವಯಸ್ಕರೊಡನೆ ಮಾಡಿಕೊಂಡ ಯಾವುದೇ ಒಪ್ಪಂದವಾದರೂ ಊರ್ಜಿತವಾಗುವುದಿಲ್ಲ.—ಇತ್ಯಾದಿ ವಿಚಾರಗಳು ಈ ಸ್ಮೃತಿಯಲ್ಲಿ ವಿಶದವಾಗಿ ಪ್ರಸ್ತಾಪಿತವಾಗಿವೆ.

## ಬೃಹಸ್ಪತಿ ಸ್ಮೃತಿ

ಈ ಗ್ರಂಥ ಸಂಪೂರ್ಣವಾಗಿ ಉಪಲಬ್ಧವಾಗಿಲ್ಲ. ಇದರಲ್ಲಿ ಪಾಲುಗಾರಿಕೆ ವ್ಯಾಪಾರ ವ್ಯವಹಾರಗಳಲ್ಲಿ ಉದ್ಭವಿಸಬಹುದಾದ ನಾನಾ ಸಮಸ್ಯೆಗಳನ್ನು ಸ್ಪಷ್ಟ ಪಡಿಸಲಾಗಿದೆ ವ್ಯವಹಾರಗಳನ್ನು ಸಿವಿಲ್ ಮತ್ತು ಕ್ರಿಮಿನಲ್ ಎಂದು ವಿಂಗಡಿಸಿದ ಮೊಟ್ಟಮೊದಲ ಗ್ರಂಥವಿದು. ಸಿವಿಲ್ ಬಾಬನ್ನು ಬೃಹಸ್ಪತಿಯು ವ್ಯವಹಾರವೆಂದೂ, ಕ್ರಿಮಿನಲ್ ಬಾಬನ್ನು ಪಾತಕ—ವೆಂದೂ ಕರೆದಿದ್ದಾನೆ. ನ್ಯಾಯ ನಿರ್ಣಯ ಮಾಡುವಾಗ ಕೇವಲ ಕಾನೂನೇ ಮುಖ್ಯವಲ್ಲ—ಅದಕ್ಕೂ ಮೇಲ್ಪಟ್ಟ ಧರ್ಮ ಮತ್ತು ಸನ್ನಿವೇಶ ಹಾಗೂ ಹಾಜರು ಪಡಿಸಲಾಗುವ ಲಿಖಿತ ದಾಖಲೆಗಳನ್ನೇ ಪ್ರಧಾನವಾಗಿ ಪರಿಗಣಿಸ ಬೇಕೆಂದು ಈ ಸ್ಮೃತಿಯ ಅಭಿಪ್ರಾಯ.

## ಕಾತ್ಯಾಯನ ಸ್ಮೃತಿ

ಈ ಗ್ರಂಥ ಸಮಗ್ರವಾಗಿ ಸಿಕ್ಕಿಲ್ಲ. ಆದರೆ ಸಿಕ್ಕಿರುವ ಸ್ವಲ್ಪ ಭಾಗದ ಆಧಾರದಿಂದಲೇ ಸಮಗ್ರ ಗ್ರಂಥದ ಮಹತ್ತ್ವವನ್ನರಿಯಲು ಅವಕಾಶವಿದೆ. ನ್ಯಾಯ ನಿರ್ಣಯದಲ್ಲಿ ಅನುಸರಿಸಬೇಕಾದ [illegible] ಬಗ್ಗೆ (Legal Procedure) ಇಲ್ಲಿ ಚರ್ಚಿಸಲಾಗಿದೆ. ಈ ಸ್ಮೃತಿಕಾರ ನ್ಯಾಯಶಾಸ್ತ್ರಕ್ಕೆ ಸಂಬಂಧಿಸಿದ ಅನೇಕ ಪಾರಿಭಾಷಿಕ ಶಬ್ದಗಳನ್ನು ತಯಾರುಮಾಡಿ ಕೊಟ್ಟಿದ್ದಾನೆ. ಭಾರ್ಯಾಧನ ಸ್ತ್ರೀಧನ—ಶೌರ್ಯಧನ—ವಿದ್ಯಾಧನ—ಜಯಪತ್ರ—ಇತ್ಯಾದಿ ಅಂಶಗಳ ಪ್ರಸ್ತಾಪಮಾಡಲಾಗಿದೆ. ಔರಸನಲ್ಲದ ಪುತ್ರನಿಗೆ ತಂದೆಯ ಆಸ್ತಿಯಲ್ಲಿ, 1/4 ಭಾಗ ಹಕ್ಕಿದೆ ಎನ್ನುವ ಈ ಸ್ಮೃತಿಯಲ್ಲಿ ದಾವೆ ದಾಖಲು ಮಾಡುವ ಕ್ರಮ—ಪ್ರತಿವಾದಿಯ ಉತ್ತರ—ಸಾಕ್ಷ್ಯಾಧಾರಗಳು ನ್ಯಾಯಾಲಯಕ್ಕೆ ನೆರವು ನೀಡ ಬಲ್ಲ ಗೌರವಾನ್ವಿತ ಪಂಚಾಯ್ತಿದಾರರ (Jury) ನೇಮಕ—ನ್ಯಾಯಾಧಿಪತಿಗಿರಬೇಕಾದ ಅರ್ಹತೆಗಳು — ಇತ್ಯಾದಿ ನೂರಾರು ವಿಚಾರಗಳನ್ನು ಕೂಲಂಕಷವಾಗಿ ಚರ್ಚಿಸಲಾಗಿದೆ. ಈ ಸ್ಮೃತಿಯಲ್ಲಿ ಸಿಕ್ಕಿದದನ್ನು ಭಾಗವನ್ನೇ ಸೊಗಸಾಗಿ ಸಂಪಾದನೆ ಮಾಡಿಕೊಟ್ಟ ಕೀರ್ತಿ ಮಹಾಮಹೋಪಾಧ್ಯಾಯ ಪಾಂಡುರಂಗ ವಾಮನ ಕಾಣೆಯವರಿಗೆ ಸಲ್ಲಬೇಕು.

ಇವಲ್ಲದೆ ಕೌಟಿಲ್ಯನ ಅರ್ಥಶಾಸ್ತ್ರ, ಶುಕ್ರನೀತಿ ಸಾರ,ಮುಂತಾದ ಗ್ರಂಥಗಳನ್ನೂ ಈ ಸಂದರ್ಭದಲ್ಲಿ ಉಲ್ಲೇಖಿಸಬಹುದು. ಜತೆಗೆ ಸ್ತ್ರೀಧನ—ದಾಯಭಾಗ—ರಾಜಧರ್ಮ—ಅರಾಜಕತೆ—ಅದರ ಪರಿಣಾಮಗಳು—ರಾಜನ ಹಾಗೂ ಮಂತ್ರಿ ಸೇನಾಪತಿಗಳ ಅರ್ಹತೆಗಳು—ಮುಂತಾದ ಅನೇಕ ಅಂಶಗಳು ರಾಮಾಯಣ ಮಹಾಭಾರತಗಳಲ್ಲೂ ಪ್ರಸ್ತಾಪ ಮಾಡಲಾಗಿದೆ. ರಾಜನೀತಿಗೂ ನ್ಯಾಯಶಾಸ್ತ್ರಕ್ಕೂ ಇರುವ ಅನ್ಯೋನ್ಯ ಸಂಬಂಧವನ್ನು ನಮ್ಮ ಪೂರ್ವಿಕರು ತುಂಬ ಚೆನ್ನಾಗಿ ಮನಗಂಡಿದ್ದರು. ಭಾರತೀಯ ಋಷಿ ಪರಂಪರೆಯಲ್ಲಿ ಬಂದ ವಿದ್ವನ್ಮಣಿಗಳು ಸಕಲ ಶಾಸ್ತ್ರ ಪಾರಂಗತರೆಂಬುದರಲ್ಲಿ ಸಂದೇಹವಿಲ್ಲ. ಈ ಭವ್ಯ ಪರಂಪರೆ ಜಗನ್ಮಾನ್ಯವಾದದ್ದು. ಇದು ಭಾರತೀಯರಿಗೆಲ್ಲ ಹೆಮ್ಮೆಯ ವಿಚಾರ. ಲೋಕಕ್ಕೆ ನ್ಯಾಯದರ್ಶನ, ವನ್ನು ಅನುಗ್ರಹಿಸಿದ ಈ ಧೀಮಂತ ವ್ಯಕ್ತಿಗಳಿಗೆ ಹಿರಿಯರಿಗೆ—ನಾವೆಷ್ಟು ಋಣಿಗಳಾದರೂ ಸಾಲದು.

॥ ನಮೋ ಋಷಿಭ್ಯಃ ॥



# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.
* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ(ವೈಕುಂಠ) ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.
* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ.
* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.
* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು
* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.
* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ
* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ
* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,
* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.
* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.
* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.
* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.
* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ, ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ.

# ಗಜೇಂದ್ರ ಮೋಕ್ಷ

ತ್ರಿಕೂಟಾಚಲ ಪರ್ವತವು ಕ್ಷೀರಸಮುದ್ರವನ್ನು ಭೇದಿಸಿಕೊಂಡು ಮೇಲಕ್ಕೆ ಬಂದು ವಿಸ್ತಾರವಾದ ಮೂರು ಶಿಖರವನ್ನು ಹೊಂದಿ ಪ್ರಕಾಶಿಸುತ್ತಿತ್ತು, ಈ ಶಿಖರಗಳು ರತ್ನಮಯವಾಗಿದ್ದುವಲ್ಲದೆ, ಗಿರಿನದಿಗಳಿಂದಲೂ, ದಟ್ಟವಾದ ಕಾಡುಗಳಿಂದಲೂ, ತುಂಬಿ ರಮ್ಯವಾಗಿದ್ದಿತು. ಈ ಶಿಖರಗಳು ಸೂರ್ಯ, ಚಂದ್ರ, ಬ್ರಹ್ಮದೇವರ ಆವಾಸ ಸ್ಥಾನವೋ ಎಂಬಂತೆ ಬಹು ಅಂದವಾಗಿ ಪ್ರಕಾಶಿಸುತ್ತಿದ್ದವು.

ಈ ಪರ್ವತಕ್ಕೆ ಸೇರಿದಂತೆ, ಅದರ ಹಿಂದುಗಡೆ ವಿಶಾಲವಾದ ಸರೋವರ ಒಂದು ಇದ್ದಿತು. ಇದು ಸ್ವಚ್ಛವಾದ ಮತ್ತು ಶುಭ್ರವಾದ ನೀರಿನಿಂದ ತುಂಬಿದ್ದುದಲ್ಲದೆ, ಈ ಸರೋವರದಲ್ಲಿ ಕಮಲ, ಕಲ್ಹಾರ, ಕುಮುದ, ಕನ್ನೈದಿಲೆ ಪುಷ್ಪಗಳು ತುಂಬಿ ರಮಣೀಯವಾಗಿ ಕಾಣುತ್ತಿತ್ತು, ಸರೋವರದಲ್ಲಿ ಶಾಪಗ್ರಸ್ತವಾದ ಮೊಸಳೆಯೊಂದು ಸೇರಿಕೊಂಡು ಜನರನ್ನೂ, ಮೃಗಗಳನ್ನೂ ಹಿಂಸಿಸುತ್ತಿದ್ದಿತು.

ಹೀಗಿರುವಾಗ ಒಂದು ದಿವಸ ಪರ್ವತ ಸಂಚಾರಿಯಂತೆ ದೊಡ್ಡ ದೇಹದ ಆನೆಯೊಂದು, ಹೆಣ್ಣಾನೆಗಳ ಗುಂಪಿನೊಡನೆ, ಸ್ವೇಚ್ಛೆಯಾಗಿ ಕಾಡಿನಲ್ಲಿ ತಿರುಗುತ್ತಾ ಬಾಯಾರಿಕೆಯಿಂದ ನೀರು ಕುಡಿಯಲು, ಆ ಸರೋವರದ ಹತ್ತಿರಕ್ಕೆ ಬಂದಿತು. ಶುಭ್ರವಾದ ನೀರನ್ನು ಕಂಡು ಹರ್ಷದಿಂದ ಆನೆಯು ಸರೋವರದೊಳಕ್ಕೆ ಇಳಿದು ತೃಪ್ತಿಯಾಗಿ ನೀರು ಕುಡಿದು ಹೆಣ್ಣಾನೆಗಳೊಡನೆ ಅಲ್ಲಿ ವಿಹರಿಸುತ್ತಿತ್ತು.

ಆ ಸರೋವರದಲ್ಲಿ ಅಡಗಿಕೊಂಡಿದ್ದ ಕ್ರೂರಬುದ್ಧಿಯ ಮೊಸಳೆಯು, ಸರಿಯಾದ ಸಮಯದಲ್ಲಿ ಆ ಗಜರಾಜನ ಕಾಲನ್ನು ಬಲವಾಗಿ ಬಾಯಿಂದ ಹಿಡಿದು ನೀರಿನೊಳಕ್ಕೆ ಅದನ್ನು ಎಳೆದುಕೊಳ್ಳಲು ಪ್ರಯತ್ನಿಸಿತು. ಆನೆಯೂ ಬಲವಾಗಿದ್ದುದರಿಂದ ಮೊಸಳೆಯ ಎಳೆತಕ್ಕೆ ಜಗ್ಗದೆ, ತನ್ನ ಕಾಲನ್ನು ನೀರಿನಿಂದ ಮೇಲಕ್ಕೆ ಎಳೆಯುತ್ತಿತ್ತು. ಇಂತಹ ಪ್ರಬಲವಾದ ಎಳೆದಾಟ ಬಹುಕಾಲ ನಡೆಯಿತು. ಈ ಎರಡು ಪ್ರಬಲವಾದ ಪ್ರಾಣಿಗಳು ಹೋರಾಟ ನಡೆಸಿದವು. ಮೊಸಳೆಯು ಹಿಡಿತ ನೀರಿನೊಳಗೆ ಇದ್ದುದರಿಂದ ಅದರ ಶಕ್ತಿ ಸ್ವಲ್ಪವೂ ಕುಂದದೆ ವೃದ್ಧಿಯಾಗುತ್ತಿತ್ತು. ಆನೆಯು ಎಷ್ಟೇ ಶಕ್ತಿಯುತನಾಗಿದ್ದರೂ, ಮೊಸಳೆಯ ಹಿಡಿತದಿಂದ ಬಿಡಿಸಿಕೊಳ್ಳಲಾರದೆ, ಅದರ ಶಕ್ತಿ ಕುಂದುತ್ತಾ ಬಂದು, ಅದರ ನಿಃಶ್ವಾಸವು ನಿರುತ್ಸಾಹ ಸ್ಥಿತಿಗೆ ಬರುತ್ತಿತ್ತು. ಮಹಾಶಕ್ತಿಯೂ ಕ್ಷೀಣಿಸುತ್ತ ಅದಕ್ಕೆ ಅಧೈರ್ಯವುಂಟಾಗುತ್ತಿತ್ತು. ತನಗುಂಟಾದ ವಿಪತ್ತನ್ನು ಮನಗಂಡು, ಶಾಪಗ್ರಸ್ತನಾದ ಗಜೇಂದ್ರನು, ತನ್ನ ಕಷ್ಟಪರಿಹಾರವು ಪರಮಾತ್ಮನೊಬ್ಬನಿಂದ ಮಾತ್ರ ಸಾಧ್ಯ ಎಂಬ ಅರಿವು ಹೊಂದುವಂತಾಗಿ ಸರ್ವದುಃಖನಿವಾರಕವಾದ ಶ್ರೀಮನ್ನಾರಾಯಣನನ್ನು ಚಿಂತಿಸತೊಡಗಿತು.

ಹೀಗೆ ಶಾಪಗ್ರಸ್ತವಾದ ಗಜೇಂದ್ರನು ಜನ್ಮಜನ್ಮಾಂತರದ ಅಭ್ಯಾಸಬಲದಿಂದ ಗರುಡಾರೂಢನಾದ ಶ್ರೀಮನ್ನಾರಾಯಣನಲ್ಲಿ ಐಕ್ಯಾತ್ಮ ಬುದ್ಧಿಯನ್ನು ಹೊಂದಿತು. ಐಕ್ಯಾತ್ಮ ಬುದ್ಧಿ ಎಂದರೆ ತನಗೂ, ಇತರ ಚರಾಚರ ವಸ್ತುಗಳಿಗೂ, ಪರಮಾತ್ಮನೇ ಅಂತರಾತ್ಮನಾಗಿರುವನು ಎಂಬ ಬುದ್ಧಿ, ಸಮಸ್ತವೂ ಪರಮಾತ್ಮನ ಶರೀರ ಎಂಬ ಭಾವನೆ ಇದು.

ಇಂತಹ ಭಾವನೆಯಿಂದ ಆ ಗಜೇಂದ್ರನು, ಅಮೃತದ ನೊರೆಯಂತೆ ಭೋಗ್ಯವಾಗಿಯೂ ದೇವದೇವೋತ್ತಮನಾಗಿಯೂ, ಶಂಖ ಚಕ್ರ ಗದಾಧಾರಿಯಾಗಿಯೂ, ಇರುವ ಆ ಮಹಾಪ್ರಭುವನ್ನು ತನ್ನ ಹತ್ತಿರ ಇದ್ದ ಕಮಲಗಳನ್ನು ಕಿತ್ತುಕೊಂಡು ಪೂಜಿಸಿದನು. ತನಗೊದಗಿರುವ ವಿಪತ್ತನ್ನು ಪರಿಹರಿಸೆಂದು ಪ್ರಾರ್ಥಿಸಿದನು.

ಓಂ ನಮೋ ಮೂಲ ಪ್ರಕೃತಿಯೇ
ಅಜಿತಾಯ ಮಹಾತ್ಮನೇ
ಅನಾಶ್ರಿತಾಯ ದೇವಾಯ
ನಿಸ್ಪೃಹಾಯ ನಮೋಸ್ತು ತೇ ।

ನಮ ಆದ್ಯಾಯ ವಾಮಾಯ ಆರ್ಹ್ಯೇ
ಯಾದಿ ಪ್ರವರ್ತನೇ ।
ಅನಂತಾಯಾಚ್ಯುತಾಯ ಅವ್ಯಕ್ತಾಯ
ನಮೋನಮಃ ॥
ನಮೋ ಗುಹ್ಯಾಯ ಗೂಢಾಯ
ಗುಹಾಯ ಗುಣವರ್ತಿನೇ ।
ಅತರ್ಕ್ಯಾಯಾಪ್ರತರ್ಕ್ಯಾಯ
ಅಕಲಾಯ ನಮೋನಮಃ ॥
ನ ಮೋಹಿತಾಯ ಶಾಂತಾಯ
ನಿಶ್ಚಿಂತಾಯ ಯಶಸ್ವಿನೇ ।
ಸನಾತನಾಯ ಪೂರ್ಣಾಯ
ಪುರಾಣಾಯ ನಮೋನಮಃ ॥

ಜಗದಾದಿ ಕಾರಣನಾಗಿರುವ ಪ್ರಭುವೇ! ಅಜಿತಮೂರ್ತಿಯೇ ನಿನಗೆ ನಮಸ್ಕಾರ. ಆದಿಪುರುಷನಾಗಿ, ಶತ್ರುಗಳಿಗೆ ವಕ್ರಸ್ವರೂಪನಾಗಿ, ಜಗತ್ತಿಗೆ ಪ್ರಥಮ ಪ್ರವರ್ತಕನಾಗಿ, ಇರುವ ನಿನಗೆ ನಮಸ್ಕಾರಗಳು, ಚೇತನಾಚೇತನಗಳಲ್ಲಿ ರಹಸ್ಯವಾಗಿ ಅಂತಃಪ್ರವೇಶದಲ್ಲಿ ವಾಸಿಸುವನೂ. ಬಾಹ್ಯದೃಷ್ಟಿಗೆ ಅಗೋಚರನೂ, ಗುಣಗಳಿಗೆ ಪ್ರವರ್ತಕನೂ ಆದ ನಿನಗೆ ನಮಸ್ಕಾರಗಳು.

ಮೂಲ ಸ್ವರೂಪನೂ, ಕಾಮಕ್ರೋಧ ರಹಿತನೂ. ಚಿಂತಾರಹಿತನೂ, ಪೂರ್ಣಕಾಮನೂ, ಆದ ನಿನಗೆ ನಮಸ್ಕಾರ.

ವಿಶ್ವರೂಪಿಯಾಗಿಯೂ, ನಾರಾಯಣ ಪದವಾಚ್ಯನಾಗಿಯೂ, ಪರಮಾತ್ಮ ಸ್ವರೂಪನಾಗಿಯೂ, ಹೇಯಗುಣ ರಹಿತ ಅನಂತ ಕಲ್ಯಾಣ ಗುಣಾಕರನಾಗಿಯೂ, ದೇವತಾ ಸಾರ್ವಭೌಮನಾಗಿಯೂ, ಇರುವ ಪ್ರಭುವೇ ನಿನಗೆ ಅನಂತ ನಮಸ್ಕಾರಗಳು.

ನಾಗೇಂದ್ರ ಭೋಗ ಶಯನೀಯ ಚ
ಸುಪ್ರಿಯಾಯ
ಗೋಕ್ಷೀರ ಹೇಮ ಶುಕನೀಲ
ಘನೋಪಮಾಯ ॥
ಪೀತಾಂಬರಾಯ ಮಧುಕೈಟಭ
ನಾಶನಾಯ

ಶ್ರೀ ಡಿ. ಕೃಷ್ಣೈಂಗಾರ್

## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ. ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇನೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ಸಂಪಾದಕರು**
ಸಪ್ತಗಿರಿ
ಟಿ. ಟಿ. ಡಿ.
ತಿರುಪತಿ–517501

......ಚಾರುಮಕುಟಾಯ
ನಮೋಽಕ್ಷರಾಯ ॥

ನಾರಾಯಣ ಪದ ವಾಚ್ಯನಾಗಿಯೂ, ಪ್ರಳಯಕಾಲದಲ್ಲಿ ಶಾಶ್ವತನಾಗಿ ನಿಲ್ಲುವ ಪುರಾಣಪುರುಷನಾಗಿಯೂ, ಇರುವ ದೇವ ದೇವನಲ್ಲಿ ಶರಣಾಗತನಾಗುವೆನು.

ಅಚಿಂತ್ಯ ಮವ್ಯಕ್ತಮಚಿಂತ್ಯಮವ್ಯಯಂ
ಬ್ರಹ್ಮಾರ್ಕಯೋ ಬ್ರಹ್ಮಮಯಂ
ಸನಾತನಂ ॥

ವದಂತಿಯಂ ವೈಪುರುಷಂ ಸನಾತನಂ
ತಂಸ್ತೇಗೇಹಗುಹ್ಯಂ ಶರಣಂ ಪ್ರಪದ್ಯೇ ॥

ಯೋಗಿಗಳಿಗೆ ನಿಯಾಮಕನಾಗಿಯೂ, ರಮ್ಯವಾಗಿಯೂ, ವಿಚಿತ್ರವಾಗಿಯೂ ಇರುವ ಶಿರೋಭೂಷಣವುಳ್ಳವನಾಗಿಯೂ, ಸಾಮಾನ್ಯಜನರಿಗೆ ತಿಳಿಯಲಶಕ್ಯವಾಗಿ ಆದಿಮೂರ್ತಿಯಾಗಿಯೂ, ಪ್ರಕೃತಿ ಸಂಬಂಧರಹಿತನಾಗಿಯೂ, ಸಕಲಜೀವರುಗಳಿಗೆ ಅಂತರ್ಯಾಮಿಯಾಗಿ ಪ್ರಧಾನಕ್ಷೇತ್ರಜ್ಞನಾಗಿಯೂ, ಸ್ವೇಚ್ಛಾಧೀನವಾದ ಅಭಿವ್ಯಕ್ತವುಳ್ಳವನಾಗಿಯೂ, ಉತ್ಕೃಷ್ಟ ಪ್ರಾಪ್ಯನಾಗಿಯೂ ಇರುವ ವಾಸುದೇವನನ್ನು ಶರಣುಹೋಗುತ್ತೇನೆ.

ಕಾರ್ಯಂ ಕ್ರಿಯಾ ಕಾರಣ
ಮ ಪ್ರಮೇಯಂ
ಹಿರಣ್ಯ ನಾಭಂ ವರಪದ್ಮನಾಭಂ ॥
ಮಹಾಬಲಂ ದೇವನಿಧಿಂ ಸುರೇಶಂ
ವ್ರಜಾಮಿ ವಿಷ್ಣುಂ ಶರಣಂ
ಜನಾರ್ದನಂ ॥

ದೇವಾಧಿದೇವನಾದ ಯಾವ ಮಹಾವಿಷ್ಣುವು ಅಕ್ಷಯವಾದ ನಿಧಿಯಂತೆ, ದೇವತೆಗಳಿಗೂ ಸರ್ವಾರ್ಥಪ್ರದನಾಗಿರುವನೋ ಕಾರ್ಯ ಕ್ರಿಯಾಕಾರಣಗಳ ಸ್ವರೂಪನಾಗಿರುವನೋ, ಮತ್ತು ಲೌಕಿಕ ಪ್ರಮಾಣಗಳಿಂದ ತಿಳಿಯಲಶಕ್ಯವಾಗಿ ಪದ್ಮನಾಭ, ಹಿರಣ್ಯನಾಭ ಎಂದು ಸ್ತುತಿಸಲ್ಪಡುತ್ತಿರುವನೋ ಅಂತಹ ಜನಾರ್ದನನನ್ನು ಶರಣುಹೋಗುತ್ತೇನೆ.

ಏಕಾಯ ಲೋಕತತ್ತ್ವಾಯ
ಪರತಃ ಪರಮಾತ್ಮನೇ
ನಮಃ ಸಹಸ್ರಶಿರಸೇ
ಅನಂತಾಯ ಮಹಾತ್ಮನೇ ॥
ತ್ವಮೇವ ಶರಣಂ ದೇವ
ಋಷಯೋ ವೇದ ಪಾರಗಾಃ
ಕೀರ್ತಯಂತಿಚ ಯಾ ಸರ್ವೇ
ಬ್ರಹ್ಮಾದೀನಾಂ ಪರಾಯಣಂ ॥
ನಮಸ್ತೇ ಪುಂಡರೀಕಾಕ್ಷ ಭಕ್ತಾನಾಂ
ಅಭಯಪ್ರದ ಅಬ್ರಹ್ಮಣ್ಯ ನಮಸ್ತೇಽಸ್ತು
ತ್ರಾಹಿಮಾಂ ಶರಣಾಗತಃ ॥

ಅಭಯಪ್ರದನೇ, ಪುಂಡರೀಕಾಕ್ಷನೇ, ನಿನಗೆ ನಮಸ್ಕಾರ. ಎಲ್ಲರಿಗೂ ಅಮೃತ ಸ್ವರೂಪ ನನ್ನುಂಟುಮಾಡುವ ಪ್ರಭುವೇ ನಿನಗೆ ನಮಸ್ಕಾರ. ಶರಣಾಗತನಾದ ನನ್ನನ್ನು ಕಾಪಾಡು.

ಗಜೇಂದ್ರನ ಭಕ್ತಿಭಾವಭರಿತ ಸ್ತೋತ್ರದಿಂದ ಪ್ರೀತನಾದ ಮಹಾವಿಷ್ಣುವು, ಶಂಖ ಚಕ್ರ ಗದಾಧಾರಿಯಾಗಿ ಆ ಸರೋವರದಲ್ಲಿ ಸಾನ್ನಿಧ್ಯವನ್ನು ಕರುಣಿಸಿದನು. ಜಗತ್ಪ್ರಭುವೂ, ಜಗದಾಧಾರನೂ, ಆಗಿರುವ ಮಹಾವಿಷ್ಣುವು ಗರುಡಾರೂಢನಾಗಿ, ನೀರಿನಲ್ಲಿ ನಿಂತಿರುವ ಗಜೇಂದ್ರನನ್ನು ಮೇಲಕ್ಕೆತ್ತಲು, ನೀರಿನಲ್ಲಿ ಆನೆಯಕಾಲನ್ನು ಬಲವಾಗಿ ಕಚ್ಚಿ ಎಳೆಯುತ್ತಿರುವ ಮೊಸಳೆಯ ಕತ್ತನ್ನು ಚಕ್ರದಿಂದ ಕತ್ತರಿಸಿದನು. ಅನಂತರ ಗಜೇಂದ್ರನನ್ನು ಮೇಲಕ್ಕೆ ಎತ್ತಿದನು.

ದೇವತೆಗಳ ಶಾಪದಿಂದ ಮೊಸಳೆಯಾಗಿದ್ದ ಹಾಹಾ ಹೂಹೂ ಎಂಬ ಗಂಧರ್ವನು, ಪರಮಾತ್ಮನ ಚಕ್ರಸ್ಪರ್ಶದಿಂದ ಶಾಪವಿಮೋಚನೆ ಹೊಂದಿ ಸ್ವಾಮಿಗೆ ನಮಸ್ಕಾರ ಮಾಡಿ, ಸ್ವರ್ಗಕ್ಕೆ ಹೋದನು, ಗಜೇಂದ್ರನು ಪರಮಾತ್ಮನ ಕರಸ್ಪರ್ಶದಿಂದ ದಿವ್ಯರೂಪವನ್ನು ತಾಳಿ, ಕೈಮುಗಿದು ಮಹಾವಿಷ್ಣುವಿನ ಬಳಿ ನಿಂತನು. ಶರಣಾಗತರಲ್ಲಿ ಪ್ರೀತಿ ವಾತ್ಸಲ್ಯವುಳ್ಳ ಪರಮಾತ್ಮನು ಅವರಿಬ್ಬರಿಗೂ ಆದ ಉಪಕಾರಕ್ಕೆ ಹರ್ಷಿಸಿದನು. ಶರಣಾಗತನಾದ ಗಜೇಂದ್ರನನ್ನು ಕುರಿತು "ಎಲೈ! ಭಕ್ತಾಗ್ರೇಸರನೇ! ಯಾರು ಅಶ್ವತ್ಥ, ಸೂರ್ಯ, ಗಂಗಾ, ನೈಮಿಶಾರಣ್ಯ, ಇವುಗಳ ಹಾಗೆ ವರಪ್ರದಾನವಾದಂತೆ ನಿನಗೆ ವರಪ್ರದಾನವಾಗಿ ಬಂದ ನನ್ನನ್ನು, ನನ್ನಿಂದ ರಕ್ಷಿಸಲ್ಪಟ್ಟ ನಿನ್ನನ್ನೂ, ಈ ಸರೋವರವನ್ನೂ, ಈ ಮೊಸಳೆಯನ್ನೂ, ತ್ರಿಕೂಟ ಪರ್ವತವನ್ನೂ ಈ ಬಿದಿರು ಪೊದರುಗಳನ್ನೂ ಭಕ್ತಿಯಿಂದ ಸ್ಮರಿಸುವರೋ ಅಂತಹವರು ಸರ್ವಪಾಪಗಳಿಂದ ಬಿಡುಗಡೆ ಹೊಂದಿ ಮೋಕ್ಷಪಡೆಯುವರು" ಎಂದು ಹೇಳಿದನು. •

## ಕಿಶೋರಜಗತ್

# ನಿಮಗಿದು ತಿಳಿದಿದೆಯೆ?

೧. ವಾಲ್ಮೀಕಿ, ಕಂಬ, ತುಳಸಿ ರಾಮಾಯಣ ಇತ್ಯಾದಿಯಾಗಿ ಇನ್ನೂರಕ್ಕೂ ಹೆಚ್ಚು ರಾಮಾಯಣಗಳಿವೆ.

೨ ಕುಂಭಕೋಣದ ಬಳಿ ಇರುವ ಉಪ್ಪಿಲಿಯಪ್ಪನ್ (ಒಪ್ಪಿಲ್ಲಪ್ಪನ್) ಕೋಯಿಲಿನಲ್ಲಿ ವ್ಯಂಜನಗಳಿಗೆ ಉಪ್ಪು ಹಾಕುವುದಿಲ್ಲ.

೩ ದಕ್ಷಿಣ ಭಾರತದಲ್ಲೂ ಒಂದೇ ಒಂದು ಕಡೆ ಬ್ರಹ್ಮನಿಗೆ ಪೂಜೆಯಿದೆ– ಶ್ರೀರಂಗದ ಸಮೀಪದಲ್ಲಿರುವ ಉತ್ತಮರ್ ಕೋಯಿಲ್ ಇಲ್ಲಿ ತ್ರಿಮೂರ್ತಿಗಳ ಸನ್ನಿಧಿ ಇದೆ.

೪. ಝೀಲಂ, ಚೀನಾಬ್, ರಾವಿ, ಬಿಯಾಸ್, ಮತ್ತು ಸಟ್ಲೆಜ್ ಎಂಬ ಪಂಚನದಿಗಳನ್ನು ಪುರಾಣದಲ್ಲಿ (ಕ್ರಮವಾಗಿ) ವಿತಸ್ತಾ, ಚಂದ್ರಭಾಗ, ಐರಾವತಿ, ವಿಪಾಶಾ ಮತ್ತು ಶತದ್ರೂ ಎಂದು ಕರೆಯಲಾಗಿದೆ. (ಮಹಾಭಾರತ–ವನಪರ್ವ)

೫. ದೇವಕಿ ೧೨,೦೦೦ ವರ್ಷಗಳು ತಪಸ್ಸು ಮಾಡಿ ೩ ಜನ್ಮಗಳಲ್ಲಿ ಭಗವಂತನನ್ನು ಪುತ್ರನನ್ನಾಗಿ ಪಡೆದಳು.

೬. ಒಂದೇ ಒಂದು ಕ್ಷೇತ್ರದಲ್ಲಿ ಶ್ರೀಮನ್ನಾರಾಯಣನ ಪಾದದ ಬಳಿ ಸರಸ್ವತಿ ಕುಳಿತಿದ್ದಾಳೆ– ಕಂಚಿಯ ಯಥೋಕ್ತಕಾರಿ.

೭. ಶ್ರೀರಂಗ ಕ್ಷೇತ್ರದ ಸ್ಥಳಪುರಾಣದಲ್ಲಿ ವಿನಾಯಕನ (ಉಚ್ಚಿ ಪಿಳ್ಳೆಯಾರ್) ಪಾತ್ರವೂ ಇದೆ.

೮. ವೇದವು ಋಷಿಗಳಿಗೆ ಅಮರವಾಣಿಯಂತೆ ಕೇಳಿಬಂದದ್ದರಿಂದ "ಶ್ರುತಿ" ಎಂದು ಕರೆಯಲ್ಪಟ್ಟಿದೆ.

೯. ತಿರುಮಲೈಯಲ್ಲಿ ವೈಖಾನಸಾಗಮ ಪದ್ಧತಿಯಾದರೆ, ತಿರುಚಾನೂರಿನಲ್ಲಿ ಪಾಂಚರಾತ್ರಾಗಮ ಪದ್ಧತಿ.

೧೦. ಬ್ರಹ್ಮನನ್ನು ಸೂರ್ಯನೆಂದು, ಸೂರ್ಯನನ್ನು ಸವಿತೃನೆಂದು ಕರೆದು 'ಗಾಯತ್ರಿ' ಎಂಬ ಹೆಸರಿನಿಂದ ಆರಾಧಿಸುವೆವು ನಾವು. ಬ್ರಹ್ಮ ಎಂದರೆ ವೇದಮಂತ್ರ ಎಂಬ ಅರ್ಥವೂ ಇದೆ. ಆದ್ದರಿಂದ ಗಾಯತ್ರಿ ಉಪಾಸನೆಯನ್ನು ಬ್ರಹ್ಮೋಪಾಸನೆ ಎಂದೂ, ಗಾಯತ್ರಿ ಉಪದೇಶವನ್ನು ಬ್ರಹ್ಮೋಪದೇಶವೆಂದೂ ಕರೆಯಲಾಗಿದೆ.

೧೧. ಶ್ರೀಕೃಷ್ಣನ ದೇಹೋತ್ಸರ್ಗವಾದ ಸ್ಥಳ–ಪ್ರಭಾಸ, ಕ್ಷೇತ್ರ–ಗುಜರಾತ್.

೧೨. ಅಷ್ಟವಸುಗಳು, ಏಕಾದಶರುದ್ರರೂ, ದ್ವಾದಶಾದಿತ್ಯರೂ, ಇಬ್ಬರು ಅಶ್ವಿನಿಗಳು ಕೂಡಿ ೩೩ ದೇವತೆಗಳಾಗುವರು. ಇವರ ಅಂಶದಿಂದ ೩೩ ಕೋಟಿ ದೇವತೆಗಳು.

೧೩. ಅತ್ಯಂತ ಎತ್ತರವಾದ ಕುಳಿತಿರುವ ಮೂರ್ತಿ ಕಂಚಿಯಲ್ಲಿರುವ ಪಾಂಡವದೂತರ್– ಇದು ನಿಂತಿರುವ ಉಲಹಳಂದ ಪೆರುಮಾಳ್ ಮೂರ್ತಿಗಿಂತ ಎರಡು ಅಡಿ ಎತ್ತರವಾಗಿದೆ.

೧೪. ಸಪ್ತಸಮುದ್ರಗಳು – ಲವಣ ಇಕ್ಷು, ಸುಧಾ, ಸರ್ಪಿ, ದಧಿ, ಕ್ಷೀರ ಮತ್ತು ಜಲ.

೧೫. (a) ಪ್ರಸ್ಥಾನತ್ರಯ:– ಉಪನಿಷತ್ತುಗಳು, ಬ್ರಹ್ಮ ಸೂತ್ರಗಳು ಮತ್ತು ಭಗವದ್ಗೀತೆ.

(b) ತತ್ತ್ವತ್ರಯ:–ಚಿತ್, ಅಚಿತ್, ಈಶ್ವರ.

(c) ರಹಸ್ಯತ್ರಯ:– ಮೂಲಮಂತ್ರ, ದ್ವಯಮಂತ್ರ ಚರಮಶ್ಲೋಕ (ಇವರೊಂದಿಗೆ ಗೀತೋಪದೇಶವೂ ಕೊನೆಗೊಂಡಿರುವುದರಿಂದ ಈ ಶ್ಲೋಕಕ್ಕೆ ಚರಮಶ್ಲೋಕವೆಂದು ಹೆಸರು)

೧೬. ಶ್ರೀರಂಗದಲ್ಲಿರುವ ಪೌಂಡ್ರೀಪುರಂ ಆಂಡವನ್ ಆಶ್ರಯದಲ್ಲಿ ಯತಿವರ್ಯರಿಗೆ ಸ್ತ್ರೀ ಭಿಕ್ಷೆ ("ಅಮ್ಮಾತಾಯಿ" ತತ್ತ್ವ)

೧೭. ಸನ್ಯಾಸಿಗಳಲ್ಲಿ 4 ವಿಧಗಳು–
ಕುಟೀಚಕ ಬಹೂದಕ,
ಹಂಸ, ಪರಮಹಂಸ.

೧೮. ೪೦೦೦ ದಿವ್ಯ ಪ್ರಬಂಧದ ಮೊಟ್ಟಮೊದಲನೆಯ ಪಾಶುರವು ತಿರುಕೋಷ್ಟಿಯೂರ್ ಕ್ಷೇತ್ರವನ್ನು ಮಂಗಳಾಶಾಸನ ಮಾಡಿರುತ್ತದೆ.

೧೯. ಈ ಯುಗದ ವ್ಯಾಸರು – ೨೮ನೆಯವರು–ಶ್ರೀಕೃಷ್ಣದ್ವೈಪಾಯನರು.

೨೦. ಶ್ರೀವರಮಂಗಲಂ (ವಾನಮಾಮಲೈ) ದಿವ್ಯಕ್ಷೇತ್ರದಲ್ಲಿ (a) ತೈಲಕಾಪ್ ಮತ್ತು ಇತರ ದೇವತಾಕಾರ್ಯಗಳಿಗೆ ಉಪಯೋಗಿಸಲು ಎಣ್ಣೆ ಬಾವಿ ಇದೆ.

(b) ಮಾವಿನ ವೃಕ್ಷ ವರ್ಷವಿಡೀ ಕಾಯಿ ಬಿಡುವುದು, ಆದರೆ ಹಣ್ಣಾಗುವುದಿಲ್ಲ.

(c) ಉತ್ಸವರ್ ತೋತಾದ್ರಿ, ಉಭಯ ದೇವಿಯರು ಪೂರ್ಣವಾಗಿ ಸ್ವರ್ಣಮೂರ್ತಿಗಳು.

೨೧. ನಮಗಿಂದು ಮತತ್ರಯ, ಅವುಗಳ ಸಿದ್ಧಾಂತ, ತತ್ತ್ವನಿರೂಪಣೆಯ ವ್ಯಾಖ್ಯಾಗಳು. ಇತ್ಯಾದಿಗಳು ತಿಳಿದಿರಬೇಕಾದರೆ ಮೂವರು ಮಹಾನ್ ವ್ಯಕ್ತಿಗಳು ಕಾರಣರಾಗಿದ್ದಾರೆ.

ಅಪ್ಪಯ್ಯದೀಕ್ಷಿತರು – ಅದ್ವೈತ
ಜಯತೀರ್ಥರು – ದ್ವೈತ
ವೇದಾಂತದೇಶಿಕರು – ವಿಶಿಷ್ಟಾದ್ವೈತ



**ಶ್ರೀ ಸಿ. ಗೋವಿಂದಾಚಾರ್ಯ**

# ತಿರುಮಲೆಯಲ್ಲಿ ವಸತಿ ಸೌಲಭ್ಯ

ಸರ್ವತೋಮುಖವಾಗಿ ಏರಿದ ದರಗಳ ಹಿನ್ನೆಲೆಯಲ್ಲಿ ತಿರುಮಲೆಯಲ್ಲಿನ ತಿ. ತಿ. ದೇವಸ್ಥಾನಗಳ ವಸತಿ ಸೌಲಭ್ಯದ ದರಗಳನ್ನು ಪುನರ್ವಿಮರ್ಶಿತಗೊಳಿಸಲಾಗಿದೆ. ತಿರುಮಲೆಯಲ್ಲಿ ದೊರೆಯುವ ವಸತಿಗಳ ಬಾಡಿಗೆಯ ಪರಿಷ್ಕೃತ ದರಗಳನ್ನು ಕೆಳಗೆ ಸೂಚಿಸಲಾಗಿದೆ. ಯಾತ್ರಿಕರು ದಯವಿಟ್ಟು ಗಮನಿಸಿ ಸಹಕರಿಸಬೇಕಾಗಿ ವಿನಂತಿ.

| ವಸತಿ – ಸ್ಥಳ | | ಪರಿಷ್ಕೃತ ಬಾಡಿಗೆ/ದಿನಕ್ಕೆ |
|---|---|---|
| ವಿಶೇಷರೀತಿಯ ಕಾಟೇಜುಗಳು | ರೂ | 100–00 |
| ಟಿ. ಬಿ. ಒಳಗಿನ ಕಾಟೇಜುಗಳು | ರೂ | 70–00 |
| ಟಿ. ಬಿ. ಹೊರಗಿನ ಕಾಟೇಜುಗಳು | | |
| ಮೂರನೆಯ ಸಾಲೂ ಸೇರಿದಂತೆ: | | |
| ಎ ವಿಭಾಗ– ಗೈಸರ್‌ನೊಂದಿಗೆ | ರೂ | 20–00 |
| ಬಿ ವಿಭಾಗ– ಗೈಸರ್ ರಹಿತ | ರೂ | 12–00 |
| ವಿ ವಿ.ಸಿ. ಹಾಗೂ ಎಂ ಬಿ ಸಿ 31 ಹಾಗೂ 26 | ರೂ | 70–00 |
| ಎಂ.ಬಿ ಸಿ. ಎ–ಭಾಗ ಗೈಸರ್‌ನೊಂದಿಗೆ | ರೂ | 20–00 |
| ಎಂ.ಬಿ.ಸಿ. ಬಿ–ಭಾಗ ಗೈಸರ್ ರಹಿತ | ರೂ | 12– 0 |
| ಟಿ.ಬಿ. ಸೂಟ್‌ಗಳು ಗೈಸರ್‌ನೊಂದಿಗೆ | ರೂ | 15–00 |
| ಎ.ಟಿ.ಸಿ. ಸೂಟ್‌ಗಳು ಗೈಸರ್ ರಹಿತ | ರೂ | 10–00 |
| ಎ ಟಿ.ಸಿ. ನೆಲ ಅಂತಸ್ತು | | |
| ಎ–ಭಾಗ ಮೊದಲ ಅಂತಸ್ತಿನಲ್ಲಿಯಂತೆ | ರೂ | 30–00 |
| ಬಿ–ಭಾಗ | ರೂ | 30–00 |
| ಎಸ್.ಎಂ.ಸಿ., ಎಸ್.ಎನ್ ಸಿ., ಎ.ಎಸ್.ಸಿ., ಜಿ.ಎಸ್.ಸಿ, ಎಚ್.ವಿ ಸಿ.: | | |
| ಎ–ಭಾಗ ಗೈಸರ್ ರಹಿತ | ರೂ | 12–00 |
| ಬಿ–ಭಾಗ ” | ರೂ | 12–00 |
| ಎಚ್.ವಿ.ಡಿ.ಸಿ. ಸೂಟ್ಸ್ (ಪ್ರತಿಯೊಂದು) ಗೈಸರ್ ನೊಡನೆ | ರೂ | 25–00 |
| ಎಚ್.ವಿ.ಸಿ. ಸೂಟ್ಸ್ (ಪ್ರತಿಯೊಂದು) ಗೈಸರ್‌ರಹಿತ | ರೂ | 12–00 |
| ಎಚ್.ವಿ.ಸಿ. ಅತಿಥಿಗೃಹ ದೊಡ್ಡ ಸೂಟ್ (ಗೈಸರ್‌ನೊಡನೆ) | ರೂ | 50–00 |
| ” ” ಸಣ್ಣ ಸೂಟ್ (ಗೈಸರ್ ರಹಿತ) | ರೂ | 25–00 |
| ಎಸ್.ವಿ. ಅತಿಥಿಗೃಹ ದೊಡ್ಡ ಸೂಟ್ | ರೂ | 70–00 |
| ” ” ಮೂಲೆ ಸೂಟ್ | ರೂ | 60–00 |
| ” ” ಇತರೆ | ರೂ | 50–00 |
| ಎಸ್.ಜಿ. ಅತಿಥಿಗೃಹ I ಹಾಗೂ II ಮೂಲೆ ಸೂಟ್ | ರೂ | 60–00 |
| ಇತರೆ | ರೂ | 50–00 |
| ಎಚ್.ಆರ್.ಜಿ. ಪೂರ್ತಿ ಕಾಟೇಜು | ರೂ | 250–00 |
| ಎಸ್. ಪಿ. ಅತಿಥಿಗೃಹ: | | |
| ಮಾಸ್ಟರ್ ಸೂಟ್ ಸಂ. 9 ಹಾಗೂ ಕಿರಿಯ ಸೂಟ್‌ಗಳು ಸಂ. 7, 9 ಪರಿಷ್ಕರಣವಿಲ್ಲ | ರೂ | 750–00 |
| ಮಾಸ್ಟರ್ ಸೂಟ್ ಸಂ. 1 ಕಿರಿಯ ಸೂಟ್ ಸಂ. 6 | ” | |
| ಕಿರಿಯ ಸೂಟ್‌ಗಳು ಸಂ–2, 3, 4, 5, | ರೂ | 750–00 |
| ಶ್ರೀನಿಕೇತನ (ಪ್ರತಿ ಸೂಟ್), ಎಸ್.ಪಿ. ನಗರ್ ಅತಿಥಿಗೃಹ ನಂ.-IV | ರೂ | 250–00 |
| ಇಂದಿರಾ ಅತಿಥಿಗೃಹ (ಎ. ಸಿ.) (ಪ್ರತಿಸೂಟ್) (ಎಸ್. ಪಿ. ನಗರ್ ಅತಿಥಿಗೃಹ ನಂ–II) | ರೂ | 250–00 |
| ಬಾಲಕುಟೀರಂ (ಎ.ಸಿ.) (ಪ್ರತಿಸೂಟ್) (ಎಸ್. ಪಿ. ನಗರ್ ಅತಿಥಿಗೃಹ ನಂ–III) | ರೂ | 250–00 |
| ಗೋಕುಲಂ (ಎ. ಸಿ.) | ರೂ | 500–00 |
| ಮದುವೆಯ ಹಾಲ್‌ಗಳು–ದಿನವೊಂದಕ್ಕೆ (ಪ್ರತಿಯೊಂದು): | | |
| ಎಸ್.ಎಂ.ಸಿ. 272, 260, 266, 267 | ರೂ | 75–00 |
| ರೂಯಾ 248 | ರೂ | 100–00 |
| ಗೋಗಿನೇನಿ 226 | ರೂ | 100–00 |
| ಚಿದಂಬರಂ ಚೆಟ್ಟಿಯಾರ್ ಕಾಟೇಜ್ | ರೂ | 125–00 |
| ಎ. ಟಿ. ಸಿ.– 99 | ರೂ | 100–00 |
| ಟಿ. ಬಿ. ಸಿ. 1[illegible]6, 152, 71 | ರೂ | 75–00 |
| ಬಾಲಾಜಿ ಕಲ್ಯಾಣ ಮಂಟಪ | ರೂ | 500–00 |
| ಸೀತಾರಾಮ ಕಲ್ಯಾಣ ಮಂಟಪ | ರೂ | 1000–00 |
| ಹೊಸದಾಗಿ ನಿರ್ಮಿತವಾದುವು: | | |
| ಟಿ.ಬಿ.ಸಿ., ಎ.ಟಿ.ಸಿ. ಪೂರ್ತಿ ಕಾಟೇಜು | ರೂ | 60–00 |
| ಮೊದಲ ಅಂತಸ್ತಿನ ಕಾಟೇಜುಗಳು ಅರ್ಧ ಕಾಟೇಜು | ರೂ | 30–00 |
| ಎಸ್. ಎನ್. ಅತಿಥಿಗೃಹ ಪ್ರತಿ ಸೂಟ್ | ರೂ | 50–00 |
| ರಾಮಬಗೀಚಾ ಅತಿಥಿಗೃಹ ” | ರೂ | 50–00 |

ಯಾತ್ರಿಕರು ಸಹಕರಿಸಬೇಕೆಂದು ಕೋರಲಾಗಿದೆ — ಮುಂಗಡ ಕಾಯ್ದಿರಿಸುವಿಕೆಗಾಗಿ ಬರೆಯಿರಿ.

**ಉಪ ಕಾರ್ಯನಿರ್ವಹಣಾಧಿಕಾರಿ** (ಸ್ವಾಗತ-II)
ತಿ. ತಿ. ದೇವಸ್ಥಾನಗಳು, ತಿರುಮಲೆ.

ಗೃಹಲಕ್ಷ್ಮಿ

# ಮಹಾಸತಿ ಅರುಂಧತೀ

ಅರುಂಧತಿಯು ಮಹಾನ್ ಪತಿವ್ರತಾ ಶಿರೋಮಣಿಯೆಂದು ಮೂರು ಲೋಕಗಳಲ್ಲಿಯೂ ಪ್ರಸಿದ್ಧಳು. ಈಕೆಯ ಪಾತಿವ್ರತ್ಯಕ್ಕೆ ಸಮನಾದುದು ಇನ್ನೊಂದು ಉದಾಹರಣೆ ಇಲ್ಲ. ಮುಂದಿನ ನಾರೀಜಗತ್ತಿನ ಪೀಳಿಗೆಗಳಿಗೆ ಈಕೆಯು ಆದರ್ಶಪ್ರಾಯಳಾದಳು. ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳು ಎನ್ನುವ ಅರಿಷಡ್ವರ್ಗ ಮಾನವನ ಸ್ವಾಭಾವಿಕ ಅಂಶ, ಅಂಗಗಳಾದರೂ ಅರುಂಧತಿಯ ಕಡೆ ಕಣ್ಣೆತ್ತಿ ನೋಡುವ ಸಾಹಸವನ್ನೂ ಮಾಡಿಲ್ಲ. ಈಕೆಯಲ್ಲಿ ಕ್ಷಮೆ, ದಯೆ, ಕರುಣೆ, ಶಾಂತಿ, ಲಜ್ಜೆ, ವಿನಯ, ವಿದ್ಯೆ, ವಿವೇಕ, ಅಹಂಕಾರ ಶೂನ್ಯತೆ–ಇತ್ಯಾದಿ ಸದ್ಗುಣಗಳು ಸಹಜವಾಗಿ ವಿಕಾಸ ಹೊಂದಿದ್ದುವು. ಈಕೆಯನ್ನು ನೆನೆಸಿಕೊಂಡ ಮಾತ್ರದಿಂದಲೆ ತನು, ಮನ, ಪ್ರಾಣಗಳು ಪವಿತ್ರಗೊಳ್ಳುತ್ತವೆ ಎಂಬ ನಂಬಿಕೆ ಜನರಲ್ಲಿ ಹರಡಿದೆ.

ಈಕೆಯ ಜನನದ ಬಗ್ಗೆ ಪುರಾಣಗಳಲ್ಲಿ ಅನೇಕ ರೀತಿಯ ಪಾಠಾಂತರಗಳನ್ನು ಕಾಣಬಹುದು. ಪ್ರಮುಖವಾಗಿ ಈಕೆಯ ಉಲ್ಲೇಖವು ಮಹಾಭಾರತದಲ್ಲಿ ಕಂಡು ಬರುತ್ತದೆ. ಭಾಗವತ, ಮತ್ಸ್ಯ ಪುರಾಣಗಳಲ್ಲಿಯೂ ಈಕೆಯ ಬಗ್ಗೆ ವಿವರಗಳಿವೆ.

ಕೆಲವು ಕಡೆ ಈಕೆಯು ದಕ್ಷ ಪ್ರಜಾಪತಿಯ ಮಗಳು ಎಂದು ಹೇಳಲಾಗುತ್ತದೆ. ಇಲ್ಲಿ ಈಕೆಗೆ ಅಕ್ಷಮಾಲೆ ಎಂಬ ನಾಮಾಂತರವಿದೆ.

(ನಮ್ಮ ಪರಂಪರೆಯಲ್ಲಿ ಇಬ್ಬರು ದಕ್ಷರನ್ನು ಕಾಣಬಹುದು – ಸ್ವಾಯಂಭುವ ಮನ್ವಂತರದವನೊಬ್ಬ; ಚಾಕ್ಷುಷ ಮನ್ವಂತರದವನಿನ್ನೊಬ್ಬ. ಸ್ವಾಯಂಭುವ ಮನ್ವಂತರದವನು ಆ ಮನುವಿನ ಮಗಳಾದ ಪ್ರಸೂತಿಯನ್ನು ಮದುವೆಯಾಗಿ 24 ಮಂದಿ ಪುತ್ರಿಯರನ್ನು ಪಡೆದ. ಇವರಲ್ಲಿ ಅರುಂಧತಿಯು ಒಬ್ಬಳು)

ಮತ್ತೊಂದು ಕಡೆ ಈಕೆಯು ಕರ್ದಮ ಮುನಿಯಿಂದ ಸ್ವಾಯಂಭುವ ಮನು ಪುತ್ರಿಯಾದ ದೇವಹೂತಿ ಎಂಬಾಕೆಯಲ್ಲಿ ಜನಿಸಿದವಳು ಎಂದು ಹೇಳಲಾಗಿದೆ. ಇಲ್ಲಿ ಈಕೆಗೆ ಊರ್ಜೆ ಎಂಬುದು ನಾಮಾಂತರ. ಮರೀಚಿ ಮುನಿಪತ್ನಿಯಾದ ಕಲೆ, ಅಂಗೀರಸ ಪತ್ನಿ ಶ್ರದ್ಧೆ, ಪುಲಸ್ತ್ಯನ ಹೆಂಡತಿ ಹವಿರ್ಭುಕ್, ಕ್ರತು ಮುನಿಯ ಮಡದಿ ಕ್ರಿಯೆ, ಭೃಗು ಪತ್ನಿ ಖ್ಯಾತಿ, ಅತ್ರಿ ಪತ್ನಿ ಅನಸೂಯೆ ಮತ್ತು ಕಪಿಲ ಮಹರ್ಷಿಗಳು ಈಕೆಯ ಒಡಹುಟ್ಟಿದವರಾಗಿದ್ದಾರೆ.

ಇನ್ನೊಂದು ಪಾಠಾಂತರದ ದೃಷ್ಟಿಯಿಂದ ಈಕೆಯು ಮಹರ್ಷಿ ಮೇಧಾತಿಥಿ ಎನ್ನುವವನ ಮಗಳು ಎಂದು ಹೇಳಲಾಗುತ್ತದೆ. ಈ ಕಥೆಯನ್ನು ನಾವು ತೆಗೆದುಕೊಳ್ಳೋಣ.

ಒಂದು ದಿನ ಮೇಧಾತಿಥಿ ಋಷಿಯು ಯಜ್ಞ ಕಾರ್ಯವನ್ನು ಮಾಡುತ್ತಿದ್ದಾಗ ಅಗ್ನಿಕುಂಡದಿಂದ ಫಳಫಳ ಹೊಳೆಯುವ ವಸ್ತುವೊಂದು ಹೊರಬಂದಿತು. ಋಷಿಯು ಕೈಚಾಚಿ ಅದನ್ನು ಪಡೆಯಲು, ಅದೊಂದು ಪೀತಾಂಬರದಲ್ಲಿ ಸುತ್ತಿದ ಸೌಂದರ್ಯವತಿಯಾದ ಹೆಣ್ಣು ಮಗುವಾಗಿತ್ತು. ಅದನ್ನು ಅಗ್ನಿದೇವನ ಪ್ರಸಾದವೆಂದು ಸ್ವೀಕರಿಸಿ ಋಷಿಯು ಲಾಲನೆ – ಪಾಲನೆ ಗೈಯ್ಯತೊಡಗಿದನು.

ಚಂದ್ರಭಾಗಾ ನದಿಯ ದಡದಲ್ಲಿ ತಾಪಸಾರಣ್ಯ ಎನ್ನುವ ಒಂದು ಆಶ್ರಮವಿತ್ತು. ಮಹರ್ಷಿಯು ಇಲ್ಲಿ ಆ ಮಗುವನ್ನು ಬೆಳೆಸತೊಡಗಿದನು.

ಬಾಲ್ಯದಿಂದಲೂ ಈ ಮಗುವು ಧರ್ಮದ ಅವರೋಧವನ್ನು ಮಾಡಿದವಳಲ್ಲ. ಐದು ವರ್ಷದವಳಾಗುವಷ್ಟು ಸಮಯಕ್ಕೇನೆ ತನ್ನ ಸದ್ಗುಣಗಳಿಂದ ತಾಪಸಾರಣ್ಯವನ್ನೆ ಪವಿತ್ರ ಮಾಡಿದಳು. ಆದರಿಂದಲೇ ಈಕೆಯ ಹೆಸರು ಅರುಂಧತಿ ಎಂದಾದುದು.

ಬಾಲ್ಯದಲ್ಲಿ ಆಟಪಾಟಗಳಲ್ಲಿ ತಲ್ಲೀನಳಾಗಿದ್ದರೂ ಪೂರ್ವಜನ್ಮ ಸುಕೃತದಿಂದ ಭಗವತ್ ಪಾರಾಯಣದಲ್ಲೂ ನಿರತಳಾಗಿರುತ್ತಿದ್ದಳು. ಹಿಂದಿನ ಜನ್ಮದಲ್ಲಿ ಇವಳು ಬ್ರಹ್ಮನ ಮಾನಸ ಪುತ್ರಿಯಾಗಿದ್ದಳು. ಅದೇ ಪ್ರಭಾವ ಈ ಜನ್ಮದಲ್ಲೂ ಮುಂದುವರೆದಿತ್ತು.

ಒಂದು ದಿನ ಬ್ರಹ್ಮನು ಮಹರ್ಷಿಯ ಆಶ್ರಮಕ್ಕೆ ಬಂದನು. ಮಹರ್ಷಿ ಮೇಧಾತಿಥಿಯು ಶಿರಸಾಷ್ಟಾಂಗ ಪ್ರಣಾಮ ಮಾಡಿ, ವಿಧಿವತ್ ಪೂಜೆಯನ್ನು ಮಾಡಿದನು. ಅರುಂಧತಿಯೂ ಕೂಡ ಆಶ್ರಮಕ್ಕೆ ಬಂದ ಅತಿಥಿಯನ್ನು ಸತ್ಕರಿಸಿದಳು. ಬ್ರಹ್ಮನು ಅವಳನ್ನು ಮನಃಪೂರ್ವಕವಾಗಿ ಆಶೀರ್ವದಿಸಿದನು.



ನಂತರ ಮಹರ್ಷಿಯ ಕಡೆ ತಿರುಗಿ, "ಮಹಾಮುನಿ! ಅರುಂಧತಿಗೆ ವಿದ್ಯಾಭ್ಯಾಸ ನೀಡುವ ವಯಸ್ಸು ಬಂದಿದೆ. ಆದುದರಿಂದ ಸಾಧ್ವೀ ಶಿರೋಮಣಿಯರ ನಡುವೆ ಇರಿಸಿ, ಅವರುಗಳಿಂದ ಉತ್ತಮ ಶಿಕ್ಷಣ ನೀಡಬೇಕಾದ ಅಗತ್ಯವಿದೆ. ಪುರುಷರ ಮುಖಾಂತರ ಬಾಲಕಿಯರ ಶಿಕ್ಷಣವನ್ನು ಕೊಡಿಸಬಾರದು. ಸ್ತ್ರೀಯರೆ ಬಾಲಕಿಯರಿಗೆ ಶಿಕ್ಷಣ ನೀಡಲು ಯೋಗ್ಯರಾದವರು. ನಿಮ್ಮ ಬಳಿ ಅರುಂಧತಿಗೆ ಶಿಕ್ಷಣ ನೀಡಬಲ್ಲ ಸ್ತ್ರೀಯರ್ಯಾರೂ ಇಲ್ಲ. ಆದುದರಿಂದ ನಿಮ್ಮ ಮಗಳನ್ನು ಸಾವಿತ್ರಿ ಹಾಗೂ ಬಹುಳಾರವರ ಬಳಿ ಬಿಡಿ. ಅವರ ಬಳಿ ಇದ್ದು ಬಹಳ ಬೇಗ ವಿದ್ಯಾವಂತೆಯೂ, ಗುಣವತಿಯೂ ಆಗುವಳು". ಎಂದನು

ಬ್ರಹ್ಮನ ಈ ಆಜ್ಞೆಯನ್ನು ಮೇಧಾತಿಥಿ ಋಷಿಯು ಶಿರೋಧಾರ್ಯವೆಂದನು. ಬ್ರಹ್ಮನು ಅಲ್ಲಿಂದ ಹೊರಟುಹೋದ ಮೇಲೆ, ಮಗಳನ್ನು ಕರೆದುಕೊಂಡು ಋಷಿಯು ಸೂರ್ಯಲೋಕವನ್ನು ತಲುಪಿದನು.

ಅಲ್ಲಿ ಸೂರ್ಯ ಮಂಡಲದಲ್ಲಿ ಪದ್ಮಾಸನಸ್ಥಿತಳಾದ ಸಾವಿತ್ರಿ ದೇವಿಯನ್ನು ದರ್ಶಿಸಿ, ಸ್ತುತಿಸಿದನು. ಆಗ ಬಹುಳಾಳು ಅಲ್ಲಿರಲಿಲ್ಲ. ಆಕೆಯು ತಪಸ್ಸು ಮಾಡುವುದಕ್ಕಾಗಿ ಮಾನಸ ಪರ್ವತವನ್ನು ಸೇರಿದ್ದಳು. ಆದುದರಿಂದ ಸಾವಿತ್ರೀ ದೇವಿಯು, ತಂದೆ ಮಗಳನ್ನು ಕರೆದುಕೊಂಡು ಮಾನಸಪರ್ವತವನ್ನು ತಲುಪಿದಳು.

ಅಲ್ಲಿ ಪ್ರತಿದಿನವೂ ಸಾವಿತ್ರೀ, ಗಾಯತ್ರೀ ಬಹುಳಾ, ಸರಸ್ವತಿ ಹಾಗೂ ದ್ರುಪದ ದೇವಿಯರು

ರಘುಸುತ

ಮಾನಸ ಪರ್ವತದಲ್ಲಿ ಸೇರಿ, ಧರ್ಮ ಚರ್ಚೆಗಳನ್ನು ಮಾಡುತ್ತಿದ್ದರು. ಅಂತೆಯೇ ಲೋಕ ಕಲ್ಯಾಣ ಕಾರ್ಯಗಳನ್ನೂ ನಿಯೋಜಿಸುತ್ತಿದ್ದರು. ಈ ಕಾರಣದಿಂದ ಸಾವಿತ್ರೀದೇವಿಯು ತಂದೆ ಮಗಳನ್ನು ಅಲ್ಲಿಗೆ ಕರೆದೊಯ್ದಳು.

ಆ ದೇವಿಯರನ್ನು ನೋಡಿದ ಕೂಡಲೆ ಮಹರ್ಷಿಯು ಅವರಿಗೆ ವಂದಿಸಿ, ಅವರನ್ನು ಸ್ತುತಿಸಿದನು. ಅನಂತರದಲ್ಲಿ ಹೀಗೆಂದನು.

"ದೇವಿಯರೆ! ಈ ಮಗುವು ನನ್ನ ಮಗಳು ಅರುಂಧತೀ, ಇವಳಿಗೆ ವಿದ್ಯಾಭ್ಯಾಸ ನೀಡುವ ಸಮಯ ಪ್ರಾಪ್ತವಾಗಿದೆ ತಾವು ಇವಳನ್ನು ತಮ್ಮ ಬಳಿಯಲ್ಲಿ ಇರಿಸಿಕೊಂಡು, ಸೂಕ್ತ ಶಿಕ್ಷಣವನ್ನು ನೀಡಬೇಕಾಗಿ ನನ್ನ ಸವಿನಯ ಪ್ರಾರ್ಥನೆ. ಇವಳನ್ನು ಸಾಧ್ವೀ ಶಿರೋಮಣಿ ಹಾಗೂ ಸಚ್ಚಾರಿತ್ರ್ಯ ಉಳ್ಳವಳನ್ನಾಗಿ ದಯವಿಟ್ಟು ಪರಿವರ್ತಿಸಿ. ಇದೇ ಬ್ರಹ್ಮನ ಆಜ್ಞೆ, ಇದೇ ನನ್ನ ಹೃದಯದಾಸೆಯೂ ಹೌದು".

ಸಾವಿತ್ರೀದೇವಿಯು ಬಹುಳಾಳ ಹೃದಯದ ಮಾತನ್ನು ಪ್ರತಿಧ್ವನಿಸಿದಳು,

"ಮಹರ್ಷಿ! ನಿಮ್ಮ ಮಗಳ ಮೇಲೆ ಶ್ರೀಮನ್ನಾರಾಯಣನ ಕೃಪೆಯೇ ಇದೆ. ಇದರಿಂದ ಅವಳು ಮೊದಲಿಂದಲೂ ಸಚ್ಚಾರಿತ್ರ್ಯವುಳ್ಳವಳೇ ಆಗಿದ್ದಾಳೆ. ಅದರೂ ಬ್ರಹ್ಮನ ಆಜ್ಞೆ ಇರುವುದರಿಂದ ಅವಳನ್ನು ನಮ್ಮ ಬಳಿ ಇಟ್ಟುಕೊಂಡೇ ಇಟ್ಟುಕೊಳ್ಳುತ್ತೇವೆ. ಈಕೆಯು ಖಂಡಿತವಾಗಿ ನಿಮಗೂ, ನಿಮ್ಮ ವಂಶಕ್ಕೂ, ಸ್ತ್ರೀ ಸಮುದಾಯಕ್ಕೂ ಗೌರವ ಪ್ರದಾನಳಾಗಿರುತ್ತಾಳೆ".

ಆ ನಂತರದಲ್ಲಿ ಮೇಧಾತಿಥಿಯು ಅಲ್ಲಿಂದ ಹೊರಟುಹೋದನು. ಅರುಂಧತಿಯು ಅಲ್ಲಿಯೇ ಇದ್ದು, ಸಾವಿತ್ರೀ ಹಾಗೂ ಬಹುಳಾದವರುಗಳ ಸೇವೆ ಮಾಡುತ್ತಾ ತನ್ನ ಶಿಕ್ಷಣವನ್ನು ಪಡೆಯತೊಡಗಿದಳು. ಇಂತಹ ಜಗನ್ಮಾತೆಯರ ಸೇವಾ ಸೌಭಾಗ್ಯವನ್ನು ಪಡೆದುದಕ್ಕಾಗಿ ಅರುಂಧತಿಯು ತನ್ನನ್ನು ತಾನೆ ಅದೃಷ್ಟವಂತಳು ಎಂದುಕೊಂಡಳು.

ಈ ರೀತಿಯಲ್ಲಿ ಏಳು ವರ್ಷಗಳು ಉರುಳಿದುವು.

ಸ್ತ್ರೀಧರ್ಮದ ಶಿಕ್ಷಣ, ಪತಿವ್ರತಾ ಧರ್ಮದ ತತ್ತ್ವಗಳ ಉಪದೇಶಗಳನ್ನು ಪಡೆದ ಅರುಂಧತಿಯು ಸಾವಿತ್ರೀ, ಬಹುಳಾದವರುಗಳಿಗಿಂತಲೂ ಶ್ರೇಷ್ಠಳಾದಳು.

ಅರುಂಧತಿಯು ವಯಸ್ಕಳಾದಳು. ಸಾವಿತ್ರೀದೇವಿಗೆ ಈ ಭಾವನೆಯು ಹೊಳೆದು, ಕೂಡಲೆ ಅವಳಿಗೆ ವಿವಾಹ ಮಾಡಬೇಕೆಂಬ ಸನ್ನಾಹಗಳನ್ನು ಮಾಡತೊಡಗಿದಳು. ಇದಕ್ಕೆ ಶ್ರೀವಿಷ್ಣು, ಶಂಕರರ ಅನುಮತಿ, ಆಶೀರ್ವಾದಗಳನ್ನೂ ಪಡೆಯಲಾಯಿತು. ಬ್ರಹ್ಮನ ಸಹಕಾರವೂ ದೊರೆಯಿತು.

ಮಹರ್ಷಿ ನಾರದರು ಈ ಕಾರ್ಯದಲ್ಲಿ ಮುಂದಾಳುತ್ವವನ್ನು ವಹಿಸಿದರು. ಅವರು ಕ

ವಿಚಾರವನ್ನೆಲ್ಲ ಮೇಧಾತಿಥಿಗೆ ತಿಳಿಸಿ, ಆತನನ್ನು ಕರೆದು ತಂದರು. ಇತರೇ ದೇವತೆಗಳು ಈ ಕಾರ್ಯಕ್ಕೆ ತಮ್ಮ ಸಹಮತವನ್ನು ತೋರಿಸಿದರು.

ಮೇಧಾತಿಥಿಯು ನಾರದ ಮಹರ್ಷಿಗಳ ನೇತೃತ್ವದಲ್ಲಿ ಇತರೇ ದೇವತೆಗಳು ಹಾಗೂ ಅರುಂಧತಿಯೊಂದಿಗೆ ಹೊರಟರು.

ವಸಿಷ್ಠ ಮಹರ್ಷಿಗಳು ಮಾನಸ ಪರ್ವತದ ಗುಹೆಯೊಂದರಲ್ಲಿ ಕುಳಿತು, ಘನಘೋರ ತಪಸ್ಸನ್ನು ಮಾಡುತ್ತಿದ್ದರು. ಆ ತಪಸ್ಸು ಮುಗಿಯುವವರೆಗೂ ಮೇಧಾತಿಥಿಯು ಕಾಯುತ್ತಿದ್ದು ನಂತರ ಆತನಲ್ಲಿ ವಿನಂತಿಸಿಕೊಂಡನು,

"ಭಗವನ್! ಈಕೆಯು ನನ್ನ ಮಗಳು, ಅರುಂಧತಿ. ವಿಧಿವತ್ತಾಗಿ ಇದುವರೆವಿಗೂ ಈಕೆಯು ಬ್ರಹ್ಮಚರ್ಯವನ್ನು ಪಾಲಿಸುತ್ತಾ ಇದ್ದಾಳೆ. ತಾವು ಈಕೆಯನ್ನು ಬ್ರಾಹ್ಮ ವಿವಾಹದ ವಿಧಿಗಳ ಅನುಸಾರವಾಗಿ ವಿವಾಹವಾಗಿ, ತಮ್ಮ ಪತ್ನಿಯನ್ನಾಗಿ ಸ್ವೀಕರಿಸಿ."

ಮಹರ್ಷಿ ಮೇಧಾತಿಥಿಯ ಈ ಪ್ರಾರ್ಥನೆಯನ್ನು ವಸಿಷ್ಠರು ಆಲಿಸಿದರು. ಈ ವಿವಾಹಕ್ಕೆ ಬ್ರಹ್ಮ, ವಿಷ್ಣು, ಮಹೇಶ್ವರರ ಒಪ್ಪಿಗೆ, ಆಶೀರ್ವಾದಗಳಿರುವುದನ್ನೂ ಅರಿತರು. ತಮ್ಮ ತಪೋಬಲದಿಂದ ಮುಂದೆ ಸಂಭವಿಸುವ ಘಟನೆಗಳ ಬಗ್ಗೆಯೂ ತಿಳಿದರು

ನಂತರ ಅರುಂಧತಿಯ ಕಡೆಗೆ ನೋಡಿದರು. ಆಕೆಯ ದೃಷ್ಟಿಯು ತಮ್ಮ ಚರಣಗಳಲ್ಲಿ ಕೇಂದ್ರೀಕೃತವಾಗಿರುವುದನ್ನು ಅರಿತು, ಆಕೆಯು ತಮಗೆ ಅನುಕೂಲಳೆಂಬುದನ್ನು ಅರಿತು, ಈ ವಿವಾಹಕ್ಕೆ ತಮ್ಮ ಒಪ್ಪಿಗೆಯನ್ನು ನೀಡಿದರು.

ಆ ನಂತರದಲ್ಲಿ ಎಲ್ಲ ದೇವತೆಗಳೂ ಒಟ್ಟುಗೂಡಿ ಈ ಪವಿತ್ರ ವಿವಾಹೋತ್ಸವವನ್ನು ನೆರವೇರಿಸಲು ಸಕಲ ಸಿದ್ಧತೆಗಳನ್ನೂ ಮಾಡತೊಡಗಿದರು ಈ ಕಾರ್ಯಕ್ಕಾಗಿ ಅನೇಕ ದುರ್ಲಭ ಅಮೂಲ್ಯ ಸಾಮಗ್ರಿಗಳನ್ನೂ ನೀಡಿದರು.

ವಿವಾಹದ ಸಮಯದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರು ಉಪಸ್ಥಿತರಿದ್ದರು. ಇವರ ಮುಖಾಂತರ ಅಭಿಷೇಕ ಮಾಡಲ್ಪಟ್ಟ ಜಲಧಾರೆಗಳೇ ಮುಂದುವರೆದು ಗೋಮತೀ, ಸರಯೂ, ಕ್ಷಿಪ್ರಾ ಹಾಗೂ ಮಹಾನದೀ ಇತ್ಯಾದಿ ಸಪ್ತನದಿಗಳಾಗಿ ಪರಿವರ್ತಿತವಾದವು. ಅವುಗಳನ್ನು ದರ್ಶಿಸುವುದು, ಸ್ಪರ್ಶಿಸುವುದು, ಅವುಗಳಲ್ಲಿ ಸ್ನಾನಮಾಡುವುದು ಮತ್ತು ಅವುಗಳ ಜಲಪಾನ ಮಾಡುವುದರಿಂದ ಜಗತ್ತಿನ ಕಲ್ಯಾಣವಾಗುತ್ತದೆ ಎಂಬ ನಂಬಿಕೆ.

ವಸಿಷ್ಠರು ಹಾಗೂ ಅರುಂಧತಿಯರ ವಿವಾಹವು ಅತ್ಯಂತ ವೈಭವದಿಂದ ನಡೆಯಿತು. ನಂತರ ಬ್ರಹ್ಮನು ನೀಡಿದ ದಿವ್ಯವಿಮಾನವೊಂದರಲ್ಲಿ ತಮ್ಮ ಇಚ್ಛಾನುಸಾರ ಇವರು ದೇವಭೂಮಿಗಳನ್ನೆಲ್ಲ ದರ್ಶಿಸಿ ಬಂದರು.

(ವಸಿಷ್ಠರು ಕರ್ದಮ ಮುನಿಯ ಮಗಳಾದ ಊರ್ಜೆ ಎಂಬುವಳನ್ನು ಮದುವೆಯಾಗಿದ್ದರೆಂದೂ, ಇದು ಅವರ ಮೊದಲನೆ ವಿವಾಹವೆಂದೂ ಎಂಬ ಒಂದು ಪಾಠಾಂತರವಿದೆ. ಏಳು ಮಕ್ಕಳನ್ನು ಹೆತ್ತ ನಂತರ ಆಕೆಯು ಮರಣ ಹೊಂದಿದಳೆಂದೂ, ಇದರಿಂದ ಮನನೊಂದ ವಸಿಷ್ಠರು ಮಾನಸ ಪರ್ವತದ ಗುಹೆಯೊಂದನ್ನು ಹೊಕ್ಕರೆಂದೂ, ಅವರನ್ನು ಪ್ರಪಂಚ ವ್ಯವಹಾರಗಳಿಗೆ ಮರಳುವಂತೆ ಮಾಡಲು ಎರಡನೆ ವಿವಾಹ ನೆರವೇರಿತು ಎನ್ನಲಾಗಿದೆ).

ನಂತರ ಹಿಮಾಲಯ ಪರ್ವತದ ತಪ್ಪಲಿನಲ್ಲಿ ಆಶ್ರಮವೊಂದನ್ನು ನಿರ್ಮಿಸಿಕೊಂಡು ಇವರಿಬ್ಬರೂ ದೀರ್ಘಕಾಲದವರೆಗೆ ತಪಸ್ಸನ್ನಾಚರಿಸುತ್ತಿದ್ದರು.

ಈ ಆಶ್ರಮದಲ್ಲಿಯೇ ಮಹಾರಾಜಾ ದಿಲೀಪನು ತನ್ನ ರಾಣಿ ಸುದಕ್ಷಿಣಾಳೊಂದಿಗೆ ಕಾಮಧೇನು ಪುತ್ರಿಯಾದ ನಂದಿನಿಯ ಸೇವೆ ಮಾಡಿ, ತನ್ನ ಇಷ್ಟಾರ್ಥಸಿದ್ಧಿಗಳನ್ನು ಪಡೆದನು.

ಒಮ್ಮೆ ಅಗ್ನಿಯು ಸಪ್ತರ್ಷಿಗಳ ಪತ್ನಿಯರನ್ನು ಕಾಮಿಸಲು ಪ್ರಯತ್ನಿಸಿದ. ಶಾಪದ ಭಯದಿಂದ ತತ್ತರಿಸಿದ ಅಗ್ನಿಪತ್ನಿ ಸ್ವಾಹಾಳು ಆ ಋಷಿ ಪತ್ನಿಯರ ರೂಪವನ್ನು ಧರಿಸಿ ಅಗ್ನಿಯನ್ನು ಸಂತುಷ್ಟಗೊಳಿಸಿದಳು.

ಆದರೆ ಎಷ್ಟೇ ಪ್ರಯತ್ನಿಸಿದರೂ ಆವಳಿಗೆ ಅರುಂಧತಿಯ ರೂಪವನ್ನು ಧರಿಸಲು ಸಾಧ್ಯವಾಗಲಿಲ್ಲ. ಅದರಲ್ಲಿ ಅಸಫಲಳಾದಾಗ, ಇಷ್ಟು ಹೊತ್ತಿಗೆ ಸಂತೃಪ್ತಗೊಂಡಿದ್ದ ಅಗ್ನಿಗೆ ತನ್ನ ತಪ್ಪಿನ ಅರಿವಾಗಿತ್ತು.

ನಂತರ ಸ್ವಾಹಾಳು ಅರುಂಧತಿಯ ಬಳಿಗೆ ಹೋಗಿ, ಕೈಜೋಡಿಸಿ ನಮಸ್ಕರಿಸಿ ಎಲ್ಲ ವಿಷಯಗಳನ್ನೂ ನಿವೇದಿಸಿಕೊಂಡಳು. ತನ್ನನ್ನು ಕ್ಷಮಿಸುವಂತೆ ಬಹುವಾಗಿ ಪ್ರಾರ್ಥಿಸಿಕೊಂಡಳು

"ಅರುಂಧತಿ, ನೀನು ನಿಜ ಅರ್ಥದ ಪತಿವ್ರತಾ ಶಿರೋಮಣಿಯಾಗಿರುವೆ. ನೀನು ಧನ್ಯಳು. ಪ್ರಪಂಚದಲ್ಲಿ ನೀನೊಬ್ಬಳೆ ಪತಿವ್ರತಾಧರ್ಮವನ್ನು ಸರಿಯಾದ ರೀತಿಯಲ್ಲಿ ಅರ್ಥ ಮಾಡಿಕೊಂಡಿರುವವಳು, ಅಂತೆಯೆ ಅದನ್ನು ಪಾಲಿಸುತ್ತಿರುವವಳೂ ಆಗಿರುವೆ. ವಧುಗಳಲ್ಲಿ ವಿವಾಹದ ಸಮಯದಲ್ಲಿ ಶುದ್ಧ ಹಾಗೂ ಏಕಾಗ್ರಚಿತ್ತದಿಂದ ಬ್ರಾಹ್ಮಣರು ಹಾಗೂ ಅಗ್ನಿಸಾಕ್ಷಿಯಾಗಿ, ಅವರ ಸಮಕ್ಷಮದಲ್ಲಿ ತಮ್ಮ ಪತಿದೇವರುಗಳ ಕೈಹಿಡಿವ ಯಾರು ನಿನ್ನನ್ನು ಸ್ಮರಿಸುತ್ತಾರೆಯೋ ಅವರಿಗೆ ಸಮಸ್ತ ಸುಖಗಳು, ಧನ, ಅಖಂಡ ಸೌಭಾಗ್ಯ ಹಾಗೂ ಪುತ್ರ ಪ್ರಾಪ್ತಿಯ ಅನುಗ್ರಹವಾಗಲಿ".

ಎಂದು ಹರಸಿ, ಅಲ್ಲಿಂದ ತೆರಳಿದಳು.

ಒಮ್ಮೆ ಸ್ತ್ರೀಯ ಪಾತಿವ್ರತ್ಯ ಧರ್ಮದ ಬಗ್ಗೆ ಜಿಜ್ಞಾಸೆ ಉಂಟಾಯಿತು. ಇದಕ್ಕಾಗಿ ಸೂರ್ಯ, ಅಗ್ನಿ, ಇಂದ್ರ—ಈ ಮೂರೂ ದೇವತೆಗಳು ಅರುಂಧತಿಯ ಬಳಿಗೆ ಈ ಸಂಶಯದ ನಿವಾರಣೆಗಾಗಿ ಬಂದರು.

ಅದೇ ಸಮಯಕ್ಕೆ ಸರಿಯಾಗಿ ಅರುಂಧತಿಯು ಕೊಡವನ್ನೆತ್ತಿಕೊಂಡು ನೀರು ತರಲು ಹೊರಟಿದ್ದಳು. ತಮ್ಮ ಆಶ್ರಮಕ್ಕೆ ದೇವತೆಗಳು ಬಂದಿರುವುದನ್ನು ನೋಡಿ, ಅರುಂಧತಿಯು ಕೊಡವನ್ನು ನದೀದಡದ ಒಂದು ಶುದ್ಧಿ ಮಾಡಿದ ಸ್ಥಳದಲ್ಲಿ ಇರಿಸಿ, ಆ ದೇವತೆಗಳಿಗೆ ಪ್ರದಕ್ಷಿಣೆ ನಮಸ್ಕಾರಗಳನ್ನು ಹಾಕಿದಳು. ನಂತರ ಅವರನ್ನು,

"ತಾವು ಯಾವ ಕಾರ್ಯಾರ್ಥವಾಗಿ ಇಲ್ಲಿಗೆ ದಯಮಾಡಿಸಿರುವಿರಿ. ದಯವಿಟ್ಟು ತಿಳಿಸಿ,"

ಎಂದು ಪ್ರಾರ್ಥಿಸಿದಳು.

"ದೇವಿ, ನಮ್ಮ ಮನಸ್ಸಿನಲ್ಲಿ ಸಮಸ್ಯೆಯೊಂದು ಉತ್ಪನ್ನವಾಗಿ ಕೀಟದಂತೆ ನಮ್ಮನ್ನು ಕೊರೆಯುತ್ತಿದೆ. ಅದರ ಪರಿಹಾರಕ್ಕಾಗಿ ನಿನ್ನ ಬಳಿ ಬಂದಿದ್ದೇವೆ." ಎಂದು ಆ ದೇವತೆಗಳು ಹೇಳಿದರು.

"ಹಾಗಿದ್ದಲ್ಲಿ ತಾವು ಆಶ್ರಮದ ಬಳಿ ಕುಳಿತು, ಸ್ವಲ್ಪ ಸಮಯ ವಿಶ್ರಾಂತಿ ಪಡೆಯಿರಿ. ಅಷ್ಟರಲ್ಲಿ ಈ ಕೊಡದಲ್ಲಿ ನೀರು ತುಂಬಿಕೊಂಡು ಬರುವೆನು, ನಂತರ ನೀವು ಪ್ರಶ್ನೆಗಳನ್ನು ಕೇಳಿ, ಯಥಾ ಶಕ್ತಿ ನಾನು ಉತ್ತರಿಸುವೆನು."

ಆಗ ಆ ದೇವತೆಗಳು ಆ ಕೊಡವನ್ನು ತಮ್ಮ ಪ್ರಭಾವದಿಂದ ತುಂಬಿಸುವುದಾಗಿ ತಿಳಿಸಿದರು. ಸೂರ್ಯನು ತನ್ನ ಶಕ್ತಿಯನ್ನೆಲ್ಲ ಪ್ರಯೋಗಿಸಿದನು. ಆದರೆ ಕೊಡದ ನಾಲ್ಕನೆಯ ಒಂದು ಭಾಗಕ್ಕಿಂತ ಹೆಚ್ಚಿನ ನೀರು ತುಂಬಲೇ ಇಲ್ಲ. ಇಂದ್ರ, ಮತ್ತು ಅಗ್ನಿಗಳೂ ಕೂಡ ತಮ್ಮ ಸಂಪೂರ್ಣ ಶಕ್ತಿಯನ್ನು ಪ್ರಯೋಗಿಸಿದರೂ ಕಾಲು ಕಾಲು ಭಾಗಕ್ಕಿಂತ ಹೆಚ್ಚಾಗಿ ತುಂಬಲಿಲ್ಲ.

ಉಳಿದ ಕಾಲು ಭಾಗವನ್ನು ಆ ಮೂವರು ದೇವತೆಗಳೂ ಪ್ರಯತ್ನಿಸಿದರೂನು ತುಂಬಿಸಲಾಗಲಿಲ್ಲ. ಆಗ ಅರುಂಧತಿಯು ಪತ್ನೀಧರ್ಮದ (ಸತೀ ಧರ್ಮದ) ವರ್ಣನೆಯನ್ನು ಮಾಡಿದಳು. ನಂತರ ಅದೇ ಧರ್ಮದ ಮಹಿಮೆಯಿಂದ ಕೊಡದ ಉಳಿದ ಕಾಲು ಭಾಗವು ತನ್ನಷ್ಟಕ್ಕೆ ತಾನೇ ಭರ್ತಿಯಾಯಿತು. ಇದರ ಮುಖಾಂತರ ಆ ದೇವತೆಗಳಿಗೆ ತಾವು ಕೇಳಬೇಕೆಂದಿದ್ದ ಪ್ರಶ್ನೆಗಳಿಗೆ ಉತ್ತರ ಸಿಕ್ಕಿದಂತಾಯಿತು. ಆದರಿಂದ ಅರುಂಧತಿಯ ಚರಣಗಳಿಗೆ ಅವರು ವಂದಿಸಿದರು. ನಂತರ ತಮ್ಮ ತಮ್ಮ ಲೋಕಗಳಿಗೆ ಹಿಂತಿರುಗಿದರು.

ಈ ರೀತಿಯಲ್ಲಿ ಅರುಂಧತಿಯ ಮಹಿಮೆಯ ವರ್ಣನೆಯು ಎಲ್ಲೆಲ್ಲಿಯೂ ದೊರೆಯುತ್ತದೆ. ಭಾರತದ ಅನೇಕ ಕಡೆಗಳಲ್ಲಿ ವಶಿಷ್ಠ ಮತ್ತು ಅರುಂಧತಿಯರ ಆಶ್ರಮಗಳಿವೆ. ಅಯೋಧ್ಯೆಯ ಸೂರ್ಯವಂಶದ ರಾಜ, ಮಹಾರಾಜರುಗಳಿಗೆ ವಶಿಷ್ಠರು ಏಕಮಾತ್ರ ಗುರುಗಳಾಗಿದ್ದರು. ಇದರಿಂದ ಅಯೋಧ್ಯೆಯಲ್ಲಿಯೂ ಇವರಿಬ್ಬರ ಆಶ್ರಮವಿದೆ. ವಶಿಷ್ಠರೊಂದಿಗೆ ಅಯೋಧ್ಯೆಯಲ್ಲಿ ಬಹಳ ವರ್ಷಗಳವರೆಗೆ ಇದ್ದುದರಿಂದ ಆ ನಗರವನ್ನು ಸುಶೋಭಿತಗೊಳಿಸಿದ್ದಳು.

ಜಗನ್ಮಾತೆ ಸೀತೆಯೂ ಕೂಡ ಅರುಂಧತಿಗೆ ವಂದಿಸಿ, ಆಕೆಯಿಂದ ಪಾತಿವ್ರತ್ಯ ಧರ್ಮದ ರಹಸ್ಯಗಳ ಉಪದೇಶವನ್ನು ಪಡೆದಳು.

ಈ ರೀತಿಯಲ್ಲಿ ಅರುಂಧತಿಯು ಭಾರತೀಯ ಜನಜೀವನದಲ್ಲಿ ಅಜರಾಮರಳಾದಳು. ರೂಪ ಗುಣ, ತಪಸ್ಸುಗಳಲ್ಲಿ ಈಕೆಗೆ ಸರಿಸಮಾನರಾಗಿ ವರು ಮೂರು ಲೋಕಗಳಲ್ಲಿಯೂ ಯಾರೂ ಇಲ್ಲ ಈಕೆಯ ಆಯುಷ್ಯವು ಏಳು ಕಲ್ಪಗಳವರೆಗೆ ಎಂದ ನಂಬಲಾಗಿದೆ. ಸಪ್ತರ್ಷಿ ಮಂಡಲದಲ್ಲಿ ಅರುಂಧತಿ ದೇವಿಗೆ ನಕ್ಷತ್ರ ಸ್ಥಾನವನ್ನು ನೀಡಲಾಗಿದೆ. ಈ ಸಮ್ಮಾನವು ಬೇರೆ ಯಾವ ಋಷಿಪತ್ನಿಗೂ, ಪ ವ್ರತೆಗೂ ದೊರೆತಿಲ್ಲ.

ವಿವಾಹವಾದ ರಾತ್ರಿ ನೂತನ ದಂಪತಿಗಳ ಈ ನಕ್ಷತ್ರವನ್ನು (ಅರುಂಧತೀ ದರ್ಶನ) ತೋ ಸುವ ವಾಡಿಕೆ ಎಲ್ಲ ಭಾರತೀಯರಲ್ಲೂ ರೂ ಯಲ್ಲಿದೆ. ಈ ರೀತಿಯ ಅರುಂಧತೀ ದರ್ಶನದಿಂ ವಧುವಿನಲ್ಲಿ ಅರುಂಧತಿಯ ಗುಣಗಳು ನಿರ್ಮಾ ವಾಗಲಿ ಎಂಬುದೇ ಇದರರ್ಥ.

ಅಲ್ಲದೆ ಈಕೆಯ ಮೇಲೆ ಅನೇಕ ಕಥಾನಕಗಳ ಭಾರತದ ಆದಿಪರ್ವದಲ್ಲಿ ಈಕೆಯು ತನ್ನ ಪತಿ ಮೇಲೆಯೇ ದ್ರೋಹವೆಸಗಿದ್ದರಿಂದ ಸೂಕ್ಷ್ಮರೂ ವನ್ನು ತಾಳಿ, ನಂತರ ಈ ಪಾಪಪರಿಹಾರ ಮಾ ಕೊಂಡಳು. ಅಂತೆಯೇ ಭೀಷ್ಮ ಪರ್ವದ ಈಕೆಯು ವಶಿಷ್ಠನ ಎದುರುಗಡೆ, ನೇರವಾ ಬಂದರೆ, ಅದರಿಂದ ಲೋಕಕ್ಕೆ ಒಂದು ಬಗೆ ಉತ್ಪಾತವಾಗುತ್ತದೆ; ಉತ್ಪಾತ ಸೂಚಕವ ಎನ್ನುವ ಭಾವವಲ್ಲದೆ, ಒಮ್ಮೆ ಈಕೆಯು ಉಕ್ಕಿ ಬೋರೆ ಹಣ್ಣುಗಳನ್ನು ಪಾಕಮಾಡಿ, ಈಶ್ವರನಿ ವರವನ್ನು ಪಡೆದಳು ಎನ್ನುವ ಕಥಾನಕವಿ ಅರುಂಧತಿ ನಕ್ಷತ್ರ ಯಾರಿಗೆ ಕಾಣುವುದಿಲ್ಲ ಅವರಿಗೆ ಮರಣ ಸನ್ನಿಹಿತವಾಗುವುದೆಂದು ಶಾ ಪರ್ವದಲ್ಲಿ ಹೇಳಿದೆ.

ಇಂತಹ ಪತಿವ್ರತೆಯ ಜೀವನ ಧನ್ಯ
ಅದನ್ನು ಓದುವ ನಮ್ಮ ಜೀವನಗಳೂ ಧನ

(ಆಧಾರಗಳ

*

# ಶಿಲಾವಿಗ್ರಹ ನೀಡಿಕೆ ಯೋಜನೆಗಳು

ವಿವಿಧ ಹಿಂದೂ ದೇವಾಲಯಗಳಲ್ಲಿ ಪ್ರತಿಷ್ಠಾಪನೆಗಾಗಿ ತಿ. ತಿ. ದೇವಸ್ಥಾನಗಳು ಶಿಲಾ ವಿಗ್ರಹ ನೀಡುವಿಕೆಯ ಎರಡು ಯೋಜನೆಗಳನ್ನು ಅಂಗೀಕರಿಸಿವೆ.

ವಿಗ್ರಹ ದಾನ ಯೋಜನೆಯಲ್ಲಿ ವಿವಿಧ ದೇವಾಲಯಗಳಿಗೆ ಪ್ರತಿಷ್ಠಾಪನೆಗಾಗಿ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀದೇವಿಯವರ ವಿಗ್ರಹಗಳನ್ನು ನೀಡಲಾಗುವುದು. ಇದಕ್ಕಾಗಿ ಅರ್ಜಿಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಗಳಿಗೆ ಕಳುಹಿಸಬೇಕು. ಜೊತೆಗೇ ದೇವಾಲಯದ ನಕ್ಷೆ, ಮಂಡಲ ಅಧಿಕಾರಿ ಅಥವಾ ಅಸಿಸ್ಟೆಂಟ್ ಕಮೀಷನರ್‌ಗಿಂತ ಕಡಮೆಯವರಲ್ಲದ ಸ್ಥಳೀಯ ದೇವಾಲಯ ಇಲಾಖಾಧಿಕಾರಿಗಳಿಂದ ಪ್ರಮಾಣಪತ್ರಗಳನ್ನು ಕಳುಹಿಸಬೇಕು.

ಹಿಂದೂ ದೇವಾಲಯಗಳಿಗಾಗಿ ಇತರ ಎಲ್ಲ ದೇವ ದೇವತೆಯರ ವಿಗ್ರಹಗಳನ್ನೂ 50% ರಿಯಾಯಿತಿ ದರದಲ್ಲಿ ಒದಗಿಸಲಾಗುವುದು. ಇದಕ್ಕಾಗಿಯೂ ಅರ್ಜಿಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಯವರಿಗೆ ಕಳುಹಿಸಬೇಕು. ಜೊತೆಗೇ ದೇವಾಲಯದ ನಕ್ಷೆ, ಮಂಡಲಾಧಿಕಾರಿ ಅಥವಾ ಅಸಿಸ್ಟೆಂಟ್ ಕಮೀಷನರ್ ಅವರ ಸ್ಥಾಯಿಯ ಸ್ಥಳೀಯ ಮುಜರಾಯಿ ಅಧಿಕಾರಿಯ ಪ್ರಮಾಣಪತ್ರವನ್ನು ಕಳುಹಿಸಬೇಕು.

ಕಾಲದಿಂದ ಕಾಲಕ್ಕೆ ತಿ. ತಿ. ದೇ. ಆಡಳಿತ ನಿರ್ವಾಹಕಮಂಡಳಿಯು ವಿಧಿಸುವ ಶರತ್ತುಗಳಿಗೆ ಅನುಗುಣವಾಗಿ ವಿಗ್ರಹಗಳನ್ನು ಸರಬರಾಜು ಮಾಡಲಾಗುವುದು.

ಈ ವಿಷಯದಲ್ಲಿನ ಎಲ್ಲ ವ್ಯವಹಾರಗಳಿಗೂ ಬರೆಯಬೇಕಾದ ವಿಳಾಸ – ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ. ತಿರುಪತಿ–517501

# ಅನ್ನಮಾಚಾರ್ಯರ ಜಯಂತಿ ಉತ್ಸವಗಳು

ಶ್ರೀ ವೆಂಕಟೇಶ್ವರಸ್ವಾಮಿಯ ಅಂತರಂಗಭಕ್ತ, ವಾಗ್ಗೇಯಕಾರ ಶ್ರೀ ಅನ್ನಮಾಚಾರ್ಯರ 580 ನೇ ಜಯಂತಿ ಉತ್ಸವಗಳನ್ನು ಆಂಧ್ರಪ್ರದೇಶದ ಅನೇಕ ಸ್ಥಳಗಳಲ್ಲಿ 1988 ನೇ ಮೇ 3 ರಿಂದ 11 ರ ವರೆಗೆ ಆಚರಿಸಲಾಯಿತು. ಹಿಂದಿನ ದಿನಗಳಂತೆ ಎಲ್ಲ ಕಾರ್ಯಕ್ರಮಗಳೂ ತಿರುಪತಿಯಲ್ಲೇ ಕೇಂದ್ರೀಕೃತವಾಗದೆ, ಜನತೆಯ ಬಳಿಗೆ ಭಕ್ತಿಯನ್ನು, ಚಿತ್ತ ಸಮತೆಯನ್ನು, ಕೊಂಡೊಯ್ಯುವ ಕಾರ್ಯಕ್ರಮವಾಗಿ, ಹೈದರಾಬಾದು, ವಿಜಯವಾಡ, ಕಾಕಿನಾಡ ತಾಳ್ಳಪಾಕ, ತಿರುಪತಿಯ ಜನತೆ, ಅನ್ನಮಾಚಾರ್ಯ ಸಂಕೀರ್ತನಾಮೃತ ವಾರಿಧಿಯಲ್ಲಿ ಅದ್ದಿ ಹೋಗುವಂತೆ ಯಶಸ್ವಿ ಆದದ್ದು ಈ ಬಾರಿಯ ಜಯಂತಿ ಉತ್ಸವಗಳ ವೈಶಿಷ್ಟ್ಯವಾಗಿದ್ದಿತು.

ಭಾಗ್ಯನಗರದಲ್ಲಿ (ಹೈದರಾಬಾದಿನಲ್ಲಿ) ಯ ರವೀಂದ್ರಭಾರತಿ ಕಲಾಕ್ಷೇತ್ರದಲ್ಲಿ ಮೇ 3 ಹಾಗೂ 4 ರಂದು ಕಾರ್ಯಕ್ರಮಗಳು ಏರ್ಪಾಡಾಗಿದ್ದವು. ಆಂಧ್ರಪ್ರದೇಶದ ಕ್ರೀಡಾ ಇಲಾಖಾ ಮಂತ್ರಿ ಶ್ರೀ ಪುಷ್ಪರಾಜ್ ಅವರ ಅಧ್ಯಕ್ಷತೆಯಲ್ಲಿ, ಮುಜರಾಯಿ ಇಲಾಖಾ ಮಂತ್ರಿ ಶ್ರೀ ಸಿಂಹಾದ್ರಿ ಸತ್ಯನಾರಾಯಣ ಅವರು ಮುಖ್ಯ ಅತಿಥಿಯಾಗಿ ಪಾಲುಗೊಂಡ ಜಯಂತಿ ಉತ್ಸವಗಳ ಉದ್ಘಾಟನಾ ಸಭೆಯಲ್ಲಿ ಸ್ವಾಗತಿಸುತ್ತ ತಿ. ತಿ. ದೇ ಕಾರ್ಯ ನಿರ್ವಹಣಾಧಿಕಾರಿ ಶ್ರೀ ಸಿ. ಎಚ್. ವೆಂಕಟಪತಿ ರಾಜು ಅವರು ಅನ್ನಮಾಚಾರ್ಯರ ಕೃತಿಗಳ ಪ್ರಚಾರ ಪರಿಶೋಧನೆಯಲ್ಲಿ ತಿ. ತಿ. ದೇ. ಪಾತ್ರವನ್ನು ವಿವರಿಸುತ್ತ, ಅನ್ನಮಾಚಾರ್ಯ ಪ್ರಾಜೆಕ್ಟ್ ಈಗಾಗಲೇ ಸಂಕೀರ್ತನೆಗಳ 25 ಧ್ವನಿ ಸುರುಳಿಗಳನ್ನು ಬಿಡುಗಡೆಮಾಡಿದ್ದು, ಈ ಉತ್ಸವಗಳಲ್ಲಿ ಮತ್ತೂ ಎಂಟು ಧ್ವನಿಸುರುಳಿಗಳನ್ನು ಬಿಡುಗಡೆ ಮಾಡಲಿರುವುದಾಗಿಯೂ ತಿಳಿಸಿ, ಪ್ರಾಜೆಕ್ಟ್ ಈಗಾಗಲೇ 4000 ಕ್ಕೂ ಮೀರಿದ ಕಾರ್ಯಕ್ರಮಗಳನ್ನು ನೀಡಿದೆ ಎಂದೂ ವಿವರಿಸಿದರು

ತಿ. ತಿ. ದೇ. ಧರ್ಮಕರ್ತರ ಮಂಡಳಿಯ ಅಧ್ಯಕ್ಷ ಶ್ರೀ ದೇವಿನೇನಿ ಸೀತಾರಾಮಯ್ಯ ಅವರು ಮಾತನಾಡುತ್ತ 1949 ರಿಂದ ಅನ್ನಮಯ್ಯ ವರ್ಧಂತಿ ಉತ್ಸವಗಳನ್ನೂ, 1978 ರಿಂದ ಜಯಂತಿ ಉತ್ಸವಗಳನ್ನೂ ತಿ. ತಿ ದೇ. ನಡೆಸಿಕೊಂಡು ಬರುತ್ತಿದೆ ಎಂದೂ, ಈ ಬಾರಿ ಆಂಧ್ರಪ್ರದೇಶದಲ್ಲಿ ಹರಡಿದ ಈ ಜಯಂತಿ ಉತ್ಸವಗಳನ್ನು ಬರುವ ವರ್ಷದಿಂದ ಉತ್ತರ ಭಾರತಕ್ಕೂ ವಿಸ್ತರಿಸಿ ಅನ್ನಮಾಚಾರ್ಯ ಸಂಕೀರ್ತನ ಸೌರಭವನ್ನು ಪಸರಿಸುವಲ್ಲಿ ತಿ. ತಿ ದೇ. ಗಂಧವಾಹ ಕಾರ್ಯ ನಿರ್ವಹಿಸುವುದೆಂದೂ ತಿಳಿಸಿದರು.

ಅಧ್ಯಕ್ಷ ಸ್ಥಾನದಿಂದ ಮಾತನಾಡಿದ ಶ್ರೀ ಪುಷ್ಪರಾಜ್ ಮಾತನಾಡುತ್ತ ಅನ್ನಮಯ್ಯ ಸಂಕೀರ್ತನಾ ಪ್ರಚಾರದಲ್ಲಿ ತಿ. ತಿ. ದೇ. ಗಳ ಕೃಷಿಯನ್ನು ಅಭಿನಂದಿಸುತ್ತ, ಅನ್ನಮಾಚಾರ್ಯರ ಹಿರಿಮೆಯನ್ನು ಮುಂದಿನ ತಲೆಮಾರುಗಳಿಗೆ ಒಪ್ಪಿಸಿಕೊಡುವುದು ಮುಖ್ಯಕರ್ತವ್ಯವಾಗಿದೆ ಯೆಂದೂ, ಈ ದಿಸೆಯಲ್ಲಿ ಇನ್ನೂ ಹೆಚ್ಚಿನ ಕೃಷಿ ನಡೆಯಬೇಕು ಎಂದೂ ಕರೆ ನೀಡಿದರು.

ಮುಖ್ಯ ಅತಿಥಿಯಾಗಿ ಆಗಮಿಸಿದ್ದ ಶ್ರೀ ಸಿಂಹಾದ್ರಿ ಸತ್ಯನಾರಾಯಣ ಅವರು ಅನ್ನಮಾಚಾರ್ಯ ಶ್ರೀ ವೆಂಕಟೇಶ್ವರಸ್ವಾಮಿಯವರುಗಳ ಅನುಬಂಧವನ್ನು ವಿವರಿಸುತ್ತ, ಪ್ರಾಜೆಕ್ಟ್ ತಯಾರಿಸಿದ ಅನ್ನಮಾಚಾರ್ಯರ ಕೃತಿಗಳ ಎಂಟು ಕ್ಯಾಸೆಟ್‌ಗಳನ್ನು ಬಿಡುಗಡೆ ಮಾಡಿದರು.



ತಿ. ತಿ. ದೇ ಗಳು ಪ್ರಕಟಿಸಿದ ಹದಿನಾರು ಧಾರ್ಮಿಕ ಗ್ರಂಥಗಳನ್ನು ತಿ. ತಿ. ದೇ. ಅಧ್ಯಕ್ಷ ಶ್ರೀ ಡಿ ಸೀತಾರಾಮಯ್ಯ ಅವರು ಬಿಡುಗಡೆ ಮಾಡಿದರು ಪ್ರಾಜೆಕ್ಟ್ ಅಧಿಕಾರಿ ಡಾ॥ ಮೇಡಸಾನಿ ಮೋಹನ್ ಅವರು ವಂದನೆ ಸಮರ್ಪಿಸಿದರು.

ನಂತರ ನಡೆದ ಸಾಹಿತ್ಯ ಸಭೆಯಲ್ಲಿ ಆಂಧ್ರಪ್ರಭ ಪತ್ರಿಕಾ ಸಂಪಾದಕರು ಶ್ರೀ ಪೊತ್ತೂರಿ ವೆಂಕಟೇಶ್ವರರಾವ್ ಅವರು ಅನ್ನಮಾಚಾರ್ಯರ ಕಾಲದ ಸಮಾಜದ ಪರಿಸ್ಥಿತಿಯ ಬಗ್ಗೆ ವಿಶೇಷ ಸಂಶೋಧನೆ ಆಗಬೇಕೆಂದೂ, ಸಂಕೀರ್ತನಗಳ ರಾಗ ನಿರ್ಣಯ ಪಂಡಿತ ಸಂಗೀತಕಾರ ಮಂಡಳಿಗಳಿಂದಾಗಬೇಕೆಂದೂ ಅಗತ್ಯಗಳನ್ನು ವಿವರಿಸಿದರು.

ಅಂದು ಸಂಜೆ ನಡೆದ ಸಂಗೀತ ಸಭೆಯಲ್ಲಿ ಶ್ರೀ ಜಿ. ನಾಗೇಶ್ವರರಾವು ವೃಂದದವರು ಅನ್ನಮಾಚಾರ್ಯರ ಸಂಕೀರ್ತನೆಗಳನ್ನು ಮನೋಹರವಾಗಿ ಹಾಡಿದರು. ನಂತರ ಎಲ್ಲಾ ವೆಂಕಟೇಶ್ವರರಾವ್ ಅವರ ಮೃದಂಗ ಸ್ವರಮಂಗಳವಾಗಿದ್ದಿತು. ಕುಮಾರಿ ಶೋಭಾನಾಯುಡು ಅವರು ಅನ್ನಮಯ್ಯ ಕೀರ್ತನೆಗಳಿಗೆ ನೃತ್ಯರೂಪವನ್ನು ನೀಡಿ ರಸಿಕರನ್ನು ರಂಜಿಸಿದರು

ಎರಡನೇ ದಿನದ ಬೆಳಗ್ಗಿನ ಸಾಹಿತ್ಯಸಭೆಯಲ್ಲಿ ಶ್ರೀ ... ಎಸ್. ಮೂರ್ತಿ ಹಾಗೂ ಶ್ರೀ ಜಿ. ವಿ. ಸುಬ್ರಹ್ಮಣ್ಯಂ ಉಪನ್ಯಾಸಗಳನ್ನು ನೀಡಿದರು. ಅಂದು ಸಂಜೆ ಶ್ರೀ ಮುರಳೀಕೃಷ್ಣ ಅವರ ವೃಂದದ ಗಾಯನಸಭೆ. ಶ್ರೀ ಅನ್ನವರಪು ರಾಮಸ್ವಾಮಿ ಅವರಿಂದ ವಯೋಲಿನ್ ಮೂಲಕ ಅನ್ನಮಾಚಾರ್ಯರ ಕೃತಿಗಳ ವಿಸ್ತಾರ, ಅನಂತರ ಶ್ರೀಮತಿ ಶೋಭಾರಾಜು ಅವರ ಗಾಯನಸಭೆಗಳು ಯಶಸ್ವಿಯಾಗಿ ನಡೆದವು.

ಮೇ 5, 6 ರಂದು ವಿಜಯವಾಡದ ಶಿವರಾಮಕೃಷ್ಣ ಕ್ಷೇತ್ರದಲ್ಲಿ ಜಯಂತಿ ಉತ್ಸವಗಳು ಮುಂದುವರೆದವು. ತಿ. ತಿ. ದೇ. ಭದ್ರತಾಧಿಕಾರಿ ಶ್ರೀ ಎಸ್. ಪಿ. ಜಯಚಂದ್ರ ಅವರ ಅಧ್ಯಕ್ಷತೆಯಲ್ಲಿ ಆಂಧ್ರಪ್ರದೇಶದ ವ್ಯವಸಾಯ ಇಲಾಖಾ ಮಂತ್ರಿ ಶ್ರೀ ವಸಂತ ನಾಗೇಶ್ವರರಾವು ಅವರು ಮುಖ್ಯ ಅತಿಥಿಯಾಗಿ ಪಾಲುಗೊಂಡು, ಶ್ರೀ ವೆಂಕಟೇಶ್ವರ ಸ್ವಾಮಿ ತತ್ತ್ವವನ್ನೂ, ಅನ್ನಮಾಚಾರ್ಯ ಸಂಕೀರ್ತನೆಗಳನ್ನೂ, ಪ್ರಸಾರ ಮಾಡುವಲ್ಲಿ ತಿ ತಿ. ದೇ. ಗಳ ಕೃಷಿಯನ್ನು ಪ್ರಶಂಸಿಸಿದರು. ಅಧ್ಯಕ್ಷ ಪೀಠದಿಂದ ಶ್ರೀ ಎಸ್. ಕೆ. ಜಯಚಂದ್ರ ಅವರು ಅನ್ನಮಾಚಾರ್ಯರನ್ನು ಜನಪದ ಕವಿಯೆಂದು ವಿವರಿಸಿದರು.

ನಂತರದ ಸಾಹಿತ್ಯಸಭೆಯಲ್ಲಿ ಶ್ರೀ ಜಂಧ್ಯಾಲ ಮಹತೀಶಂಕರ್ ಅವರು ಅನ್ನಮಾಚಾರ್ಯರ ಸಂಕೀರ್ತನೆಗಳ ಅಗಾಧತೆಯನ್ನು ವಿವರಿಸಿದರು. ಅಂದು ಸಂಜೆ ನಡೆದ ಸಂಗೀತಸಭೆಯಲ್ಲಿ ತಿ.ತಿ.ದೇ. ಹಿಂದೂ ಧರ್ಮ ಪ್ರಚಾರ ಪರಿಷತ್‌ನ ಶ್ರೀಮತಿ ಲೀಲಾವತಿ ಅವರಿಂದ ಗಾತ್ರಕಚೇರಿ ಯಶಸ್ವಿಯಾಯಿತು. ನಂತರ ಶ್ರೀ ಬಸವರಾಜು ಸೋದರರ

# ತಿರುಮಲೆ ತಿರುಪತಿ ದೇವಸ್ಥಾನಗಳು,

## ತಿರುಪತಿ.

## ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

ಸಿ. ಎಚ್. ವೆಂಕಟಪತಿ ರಾಜು, ಐ ಎ ಎಸ್.,
ಕಾರ್ಯನಿರ್ವಹಣಾಧಿಕಾರಿ.

ಪ್ರಿಯ ಭಕ್ತ ಬಂಧುಗಳೆ ;

ಅನ್ನದಾನಕ್ಕಿಂತ ಇನ್ನು ಚೆನ್ನಾದ ಉನ್ನತವಾದ ದಾನ ಮತ್ತೊಂದಿಲ್ಲ. ಹಸಿದು ಬಂದವರಿಗಶನವೀಯುವುದು ನಮ್ಮ ದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ; ವೇದಕಾಲದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ. ಆಹಾರವನ್ನು ನೀಡುವವರು ದೇವತೆಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ.

ತಿರುಮಲೆ ಯಾತ್ರಿಕರಿಗೆ ಉಚಿತವಾಗಿ ಹಾಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ 1985 ರಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ, ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ. ಭಾರತಾದ್ಯಂತದ ದಾನಿಗಳಿಂದ ಈ ಯೋಜನೆಯ ಬಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ

ಭೋಜನದ ಗುಣಮಟ್ಟವೂ, ಉತ್ಕೃಷ್ಟತೆಯೂ, ಸಾರ್ವಜನಿಕರ ಶ್ಲಾಘನೆಗೆ ಪಾತ್ರವಾಗಿದೆ. ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹುತೇಕ ಯಾತ್ರಿಕರು ಹೊಂದುತ್ತಿದ್ದಾರೆ

ನಿತ್ಯ ಅನ್ನದಾನ ಯೋಜನೆಯಲ್ಲಿ, ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಥಾಶಕ್ತಿ ವಂತಿಗೆಯನ್ನು ಸಲ್ಲಿಸುವುದರ ಮೂಲಕ, ಪಾಲುಗೊಳ್ಳುವಂತೆ ಮಾಡಬೇಕೆಂದು ಯೋಚಿಸಿ, ಈ ವಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ. ತಿ. ದೇವಸ್ಥಾನಗಳು ಈಚೆಗೆ ನಿರ್ಧರಿಸಿದೆ ತಾವು ರೂ. 1000/– ಅಥವಾ ಅದರ ಗುಣಕಗಳಲ್ಲಿ ದಾನ ಮಾಡಿದರೂ ಸಾಕು ; ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗಿ ಆ ಮೂಲಕ ಕಾಲಾತೀತ ಪರಂಪರೆಯಾದ ಅನ್ನದಾನ ಯೋಜನೆಯನ್ನು ತಿ. ತಿ. ದೇ. ಉಳಿಸಿಕೊಂಡು ಮುಂದುವರೆಯುವಂತೆ ಮಾಡಿದವರಾಗುತ್ತೀರಿ.

ದೂರದೂರುಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಬಗ್ಗೆ ತಮ್ಮ ಹೃದಯ ಸಹಾನುಭೂತಿಯಿಂದ ಆರ್ದ್ರವಾಗುವಲ್ಲಿ, ಪರಿಷ್ಕೃತವಾದ ನಿತ್ಯ ಅನ್ನದಾನ ಯೋಜನೆಯಲ್ಲಿ ಸೇರಿ, ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ

ಅನ್ನೇ ಶ್ರಿತಾನಿ ಭೂತಾನಿ ಅನ್ನಂ ಪ್ರಾಣಮಿತಿ ಶ್ರುತಿಃ ।
ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿಃ ॥

ಒಳಶಕ್ತಿಯ ಜೀವಸತ್ತ್ವ ಆಹಾರ ಎಂದು ವೇದಗಳು ಘೋಷಿಸುತ್ತಿವೆ. ಅನ್ನದಾನ, ಭೌತಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯ ಕ್ರಮವಾಗಿದೆ. ಹಾಗಾಗಿ ಅನ್ನದಾನ ಮಾಡಬೇಕು. —ಬೋಧಾಯನ ಧರ್ಮಸೂತ್ರ

ವಂದನೆಗಳೊಡನೆ
ತಮ್ಮ ವಿಶ್ವಾಸಿ,
**( ಸಿ. ಎಚ್. ವೆಂಕಟಪತಿರಾಜು )**

ವಯೋಲಿನ್, ವೇಣು, ಘಟವಾದ್ಯವಿನ್ಯಾಸ ರಸವತ್ತರವಾಗಿದ್ದಿತು ಕುಮಾರಿ ಸ್ವಾತಿ ವೃಂದದವರ ನೃತ್ಯಪ್ರದರ್ಶನ ರಸಿಕರ ಮನಗೆದ್ದಿತು.

6 ನೇ ತಾರೀಖು ಬೆಳಗ್ಗೆ ನಡೆದ ಸಾಹಿತ್ಯಸಭೆಯಲ್ಲಿ ಡಾ॥ ಸಿ. ಎಚ್. ಸುಂದರರಾಮಶರ್ಮ ಅವರು ಅನ್ನಮಾಚಾರ್ಯ ಕೀರ್ತನೆಗಳ ವೈಶಿಷ್ಟ್ಯವನ್ನು ವಿವರಿಸಿದರು. ಅಂದು ಸಂಜೆ ಪ್ರಾಜೆಕ್ಟ್ ಕಲಾವಿದೆ. ಶ್ರೀಮತಿ ಜಾನಕೀರಮಣ ಅವರ ಸಂಗೀತ ಅಮೃತೋಪಮ ಆಗಿದ್ದಿತು. ನಂತರ ಕುಮಾರಿ ಜಿ. ಜಾನಕಿ ಅವರ ಸಂಗೀತ ವೈಮರೆಸುವಂತಿದ್ದಿತು.

ಕಾಕಿನಾಡ ತಿ. ತಿ. ದೇ. ಕಲ್ಯಾಣಮಂಟಪಲ್ಲಿ ಮೇ 7, 8 ರಂದು ಉತ್ಸವಗಳ ನಡೆದವು. ಪೂರ್ವ ಗೋದಾವರಿ ಜಿಲ್ಲೆಯ ಕಲೆಕ್ಟರ್ ಶ್ರೀ ಬಿ. ಎಸ್. ವೆಂಕಟರಮಣ ಅವರ ಅಧ್ಯಕ್ಷತೆಯಲ್ಲಿ, 7 ರಂದು ಬೆಳಗ್ಗೆ, ಆಂಧ್ರಪ್ರದೇಶದ ಮುಜರಾಯಿ ಇಲಾಖಾ ಕಮೀಷನರ್ ಡಾ॥ ಜೆ. ಬಾಪುರೆಡ್ಡಿ ಅವರು ಅನ್ನಮಾಚಾರ್ಯರು ಕರ್ಮಯೋಗಿ ಎಂದು ವಿವರಿಸಿದರು, ಪ್ರಾಜೆಕ್ಟ್ ಕಲಾವಿದೆ ಕುಮಾರಿ ಜಂಧ್ಯಾಲ ಕೃಷ್ಣಕುಮಾರಿ ಅವರ ಅನ್ನಮಯ್ಯ ಹರಿಕಥೆ ಶ್ರೋತೃಗಳನ್ನು ಆಕರ್ಷಿಸಿತು. ಅಂದು ಸಂಜೆ ಪ್ರಾಜೆಕ್ಟ್ ಕಲಾವಿದ ಶ್ರೀ ಪಿ. ಎಸ್ ರಂಗನಾಥ್ ಬೃಂದದ ಗಾಯನ ಮನ ಮುಟ್ಟುವಂತಿದ್ದಿತು ನಂತರ ಶ್ರೀಮತಿ ಲಲಿತ ಹರಿಪ್ರಿಯ ವೃಂದದ ಗಾತ್ರಕಚೇರಿ, ಸಿನಿಗಾಯಕ ಶ್ರೀ ಜಿ. ಆನಂದ್ ಬೃಂದದ ಗಾಯನಲಹರಿ ಮುದಗೊಳಿಸಿದವು.

ಮೇ 8 ರಂದು ಬೆಳಗ್ಗೆ ಪ್ರಾಜೆಕ್ಟ್ ಪರಿಶೋಧಕಿ ಕುಮಾರಿ ಕೆ. ವಾಣಿ ಅವರು ಉಪನ್ಯಾಸ ನೀಡಿ ಅನ್ನಮಾಚಾರ್ಯರ ಜೀವನ ವಿಶೇಷಗಳನ್ನು ವಿವರಿಸಿದರು. ಮಹಾಕವಿ ಮಧುನಾಪಂತುಲ ಸತ್ಯನಾರಾಯಣ ಶಾಸ್ತ್ರಿ ಅವರು ಅನ್ನಮಯ್ಯ ಕಾವ್ಯಶಿಲ್ಪದ ಬಗ್ಗೆ ವಿವರಿಸಿದರು.

ಅಂದು ಸಂಜೆ ಶ್ರೀ ಪಿ. ಎಸ್. ರಂಗನಾಥ್ ವೃಂದದ ಗಾಯನ ಸಭೆ, ನಂತರ ಶ್ರೀಮತಿ ಶ್ರೀರಂಗಂ ಗೋಪಾಲರತ್ನಂ ಅವರ ಅನ್ನಮಯ್ಯ ಸಂಗೀತಲಹರಿ ನಡೆದವು. ವಿಜಯನಗರ ಗೀತಾ ಇಂಟರ್‌ನೇಷನಲ್ ಅವರು ಅರ್ಪಿಸಿದ ನಾಟ್ಯ ಹೃದಯಸ್ಪರ್ಶಿ ಆಗಿದ್ದಿತು.

ಅನ್ನಮಾಚಾರ್ಯರ ಜನ್ಮಸ್ಥಳ ತಾಳ್ಳಪಾಕದಲ್ಲಿ ಮೇ 9 ರಂದು ಉತ್ಸವ ನಡೆಯಿತು. ಅಲ್ಲಿನ ಧ್ಯಾನಮಂದಿರದಲ್ಲಿ ಶ್ರೀ ಎಸ್. ವಿ. ಆನಂದ ಭಟ್ಟರ್, ಶ್ರೀ ಡಿ ವೆಂಕಟಸುಬ್ಬಯ್ಯ ಅವರುಗಳ ಅನ್ನಮಾಚಾರ್ಯ ಕಲಾರಾಧನೆ ಆಕರ್ಷಕವಾಗಿದ್ದಿತು. ಅಂದು ಸಂಜೆ ನೆಲ್ಲೂರಿನ ಶ್ರೀ

ಶ್ರೀನಿವಾಸ ಸಾಹಿತ್ಯಮಂಡಳಿಯವರ ಅನ್ನಮಾಚಾರ್ಯ ನಾಟಕ ಪ್ರೇಕ್ಷಕರ ಮೆಚ್ಚುಗೆ ಪಡೆಯಿತು

ಮೇ 10 ಹಾಗೂ 11 ರಂದು ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಉತ್ಸವ ನಡೆಯಿತು. ಮೇ 10 ರಂದು ಬೆಳಗ್ಗೆ ಶ್ರೀ ಎನ್. ಸಿ. ವಿ ನರಸಿಂಹಾಚಾರ್ಯರು ಅನ್ನಮಾಚಾರ್ಯರ ಸಂಸ್ಕೃತ ಸಂಕೀರ್ತನೆಗಳ ಹಿರಿಮೆ ಗರಿಮೆಗಳನ್ನು ವಿವರಿಸಿದರು. ನಂತರ ಸಂಶೋಧಕಿ ಶ್ರೀಮತಿ ಪಾರ್ವತೀದೇವಿ ಅವರು ಅನ್ನಮಾಚಾರ್ಯರು ಸಾಮಾನ್ಯ ಜನದ ಕವಿ ಎಂದು ತಿಳಿಸುತ್ತ ಉಪನ್ಯಾಸಮಾಡಿದರು. ಅಂದು ಸಂಜೆ ಶ್ರೀ ಮುರಳಿ ವೃಂದದ ಗಾಯನಸಭೆ, ಡಾ॥ ಪಾರ್ಥಸಾರಥಿ ಅವರ ವೀಣಾಲಯವಿನ್ಯಾಸ. ನಂತರ ಶ್ರೀಮತಿ ಬಿ ವಸಂತ ವೃಂದದವರ ಗಾಯನ ಸಭೆಗಳು ನಡೆದವು.

ಮೇ 11 ರಂದು ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಉತ್ಸವ ಮೂರ್ತಿಗಳನ್ನು ಕಲಾಮಂದಿರಕ್ಕೆ ಬಿಜಯಗೈಸಿ ಪ್ರಾಜೆಕ್ಟ್ ಕಲಾವಿದರು ಗೋವಿಂದರಾಜಸ್ವಾಮಿಯನ್ನು ಕುರಿತ ಅನ್ನಮಯ್ಯ ಕೃತಿಗಳನ್ನು ಸಮರ್ಪಿಸಿದರು. ಶ್ರೀ ಕೆ. ಸೀತಾರಾಮಾಚಾರ್ಯರು ಅನ್ನಮಯ್ಯ–ವಾಲ್ಮೀಕಿ– ವಿಷಯದಲ್ಲೂ, ಶ್ರೀ ರಾಜನ್ನ ಕವಿಯವರು ಅನ್ನಮಯ್ಯ – ತ್ಯಾಗಯ್ಯ – ಪೋತನ ವಿಷಯದಲ್ಲೂ ಉಪನ್ಯಾಸ ನೀಡಿದರು.

ಅಂದು ಸಂಜೆ ಸಮಾರೋಪ ಸಮಾರಂಭದಲ್ಲಿ ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ ಎಚ್. ವೆಂಕಟಪತಿರಾಜು ಅವರ ಅಧ್ಯಕ್ಷತೆಯಲ್ಲಿ ಶ್ರೀ ವೀರಯ್ಯ ಅವರು ಮುಖ್ಯ ಅತಿಥಿಯಾಗಿ ಮಾತನಾಡುತ್ತ ಅನ್ನಮಯ್ಯ ತಾನು ಆಚರಿಸಿದ ವೇದಾಂತವನ್ನೇ ಪ್ರಚಾರ ಮಾಡಿದ ಹಿರಿಯನೆಂದು ವಿವರಿಸಿ ತಾಳ್ಳಪಾಕ ವಂಶಸ್ಥರನ್ನು ಸತ್ಕರಿಸಿದರು. ಡಾ॥ ಸಿ. ಅನ್ನಾರಾವ್ ಅವರು ಮಾತನಾಡುತ್ತ ಸಂಕೀರ್ತನ ಪ್ರಸಾರದಲ್ಲಿ ತಮ್ಮ ಪೂರ್ವದ ಅನುಭವಗಳನ್ನು ವಿವರಿಸಿದರು. ಅಧ್ಯಕ್ಷ ಪೀಠದಿಂದ ಮಾತನಾಡುತ್ತ ಶ್ರೀ ಸಿ. ಎಚ್. ವೆಂಕಟಪತಿರಾಜು ಅವರು, ಅನ್ನಮಾಚಾರ್ಯರ ಕೀರ್ತನೆಗಳ ಪ್ರಸಾರದಂತೆಯೇ ತ್ಯಾಗಯ್ಯ, ಶ್ಯಾಮಾಶಾಸ್ತ್ರಿ ಮೊದಲಾದ ವಾಗ್ಗೇಯಕಾರ ಕೃತಿ ಪ್ರಸಾರದ ಆಗತ್ಯವನ್ನು ವಿವರಿಸಿದರು.

ಶ್ರೀ ಎಸ್. ಕೆ. ಜಯಚಂದ್ರ ಅವರು ಸ್ವಾಗತಿಸಿದ ಸಭೆಯಲ್ಲಿ ಶ್ರೀ ವೀರಯ್ಯ ಹಾಗೂ ಡಾ॥ ಸಿ. ಅನ್ನಾರಾಯರನ್ನು ಶ್ರೀ ಸಿ. ಎಚ್. ವೆಂಕಟಪತಿರಾಜು ಅವರು ನೆನಪಿನ ಕಾಣಿಕೆಗಳನ್ನು ನೀಡಿ ಸತ್ಕರಿಸಿದರು. ಡಾ॥ ಮೇಡಸಾನಿ ಮೋಹನ್ ಅವರು ವಂದನೆ ಸಲ್ಲಿಸಿದರು.

ಸಮಾರೋಪದ ನಂತರ ಶ್ರೀಮತಿ ಪದ್ಮಾವತೀ ವೃಂದದವರ ಗಾತ್ರಕಚೇರಿ ನಡೆಯಿತು. ಶ್ರೀಮತಿ ಸುಮಿತ್ರಾ ಗುಹ ಅವರು ಹಿಂದೂಸ್ತಾನಿ ಶೈಲಿಯಲ್ಲಿ ಅನ್ನಮಾಚಾರ್ಯರ ಕೀರ್ತನೆಗಳನ್ನು ಹಾಡಿ ರಂಜಿಸಿದರು. ಕೊನೆಯಲ್ಲಿ ಶ್ರೀಮತಿ ಸಿ. ವಿಜಯಲಕ್ಷ್ಮಿ ಶರ್ಮ ವೃಂದದವರಿಂದ ಸಂಗೀತ ಕಚೇರಿ ನಡೆಯಿತು.

ಎಲ್ಲ ಕಡೆಯಲ್ಲೂ ತಿರುಪತಿ ತಿರುಮಲೆ ದೇವಸ್ಥಾನಗಳ ಪ್ರಕಟನಶಾಖೆಯು ಸುಲಭ ದರದ ಧಾರ್ಮಿಕ ಗ್ರಂಥಗಳ ರಿಯಾಯಿತಿ ಮಾರಾಟವನ್ನು ಏರ್ಪಡಿಸಿದ್ದು, ಜನ ಉತ್ಸಾಹ ಆದರಗಳಿಂದ ಪುಸ್ತಕಗಳನ್ನು ಕೊಳ್ಳುತ್ತಿದ್ದುದು ಕಂಡುಬಂದಿತು. ತಿರುಪತಿಯಲ್ಲಿ ಉತ್ಸವ ದಿನಗಳಂದು ಪ್ರಾಜೆಕ್ಟ್ ಕಲಾವಿದ ಶ್ರೀ ನಾರಾಯಣಗಿರಿ ದತ್ತು ಅವರ ನೇತೃತ್ವದಲ್ಲಿ ಏರ್ಪಾಡಾದ ಅನ್ನಮಯ್ಯ ಚಿತ್ರ ಪ್ರದರ್ಶನ ಪ್ರೇಕ್ಷಕರನ್ನು ವಿಶೇಷವಾಗಿ ಆಕರ್ಷಿಸಿತ್ತು. ಎಲ್ಲ ಕಡೆಯೂ ಉಪನ್ಯಾಸ ಸಭೆಗಳೂ, ಸಂಗೀತ ಸಭೆಗಳೂ ಹೆಚ್ಚು ಹೆಚ್ಚು ಜನವನ್ನು ಆಕರ್ಷಿಸಿ ಯಶಸ್ವಿಯಾಗಿ ನಡೆದವು.

## ದಾಸ ಸಾಹಿತ್ಯ ಪ್ರಾಜೆಕ್ಟ್ ಕಾರ್ಯಕ್ರಮಯೋಜನೆಗಳು

ದಾಸ ಸಾಹಿತ್ಯ ಪ್ರಾಜೆಕ್ಟ್ ತಜ್ಞ ಸಲಹಾ ಸಮಿತಿಯು ಸಭೆ ಸೇರಿ 1988–89 ವರ್ಷದ ಕಾರ್ಯ ಕ್ರಮಗಳ ಕರಡು ಯೋಜನೆಯನ್ನು ಅನುಮೋದಿಸಿ ಅದರಂತೆ ತಿ. ತಿ. ದೇ ಗಳಿಗೆ ಶಿಫಾರಸು ಮಾಡಲು ತೀರ್ಮಾನಿಸಿದೆ.

ದಾಸ ಸಾಹಿತ್ಯ ಪ್ರಾಜೆಕ್ಟ್, ವಸ್ತು ಪ್ರದರ್ಶನ ವಿಚಾರ ಸಂಕಿರಣಗಳನ್ನು ಮಂತ್ರಾಲಯ, ಹೊಸದೆಹಲಿ, ಕರ್ನೂಲು, ಅನಂತಪುರ, ದಾವಣಗೆರೆಗಳಲ್ಲೂ, ಗ್ರಾಮಾಂತರ ಪ್ರದೇಶಗಳಲ್ಲಿ–ಹರಿದಾಸ ಕ್ಷೇತ್ರಗಳಾದ ಮಣೂರು, ಪಂಢರಪುರ, ಮರಡಿಹಳ್ಳಿ, ವೇಣೀಸೋಮಪುರ, ಸುರಪುರಗಳಲ್ಲಿ ಹರಿದಾಸ ಆರಾಧನೆಗಳನ್ನು ನಡೆಸಬೇಕೆಂದೂ ಸಲಹೆ ನೀಡಲಾಗಿದೆ ಈ ಸ್ಥಳಗಳಲ್ಲಿ ಕಾರ್ಯಕ್ರಮಗಳನ್ನು ನಡೆಸಲಾಗದಿದ್ದಲ್ಲಿ ನೆಲ್ಲೂರು, ವೆಲ್ಲೂರು, ಶ್ರೀರಂಗಂ ಹಾಗೂ ಮಳಖೇಡ, ಕಲ್ಲೂರು, ಉತ್ತನೂರುಗಳಲ್ಲಿ ನಡೆಸಬೇಕೆಂದೂ ಸಲಹೆ ನೀಡಲಾಗಿದೆ.

ಜೂನ್ ತಿಂಗಳಲ್ಲಿ ದಾಸಸಾಹಿತ್ಯ ಪ್ರಾಜೆಕ್ಟ್, ವತಿಯಿಂದ ತಿರುಪತಿಯಲ್ಲಿ ಹಿಂದಿನ ವರ್ಷದಂತೆಯೇ ಮೆಟ್ಲೋತ್ಸವವನ್ನು ಆಚರಿಸಬೇಕೆಂದು ಸಲಹೆ ನೀಡಲಾಗಿದೆ. ಹಿಂದಿನ ವರ್ಷ ತಿರುಪತಿಯಲ್ಲಿ ಹರಿದಾಸ ಸಾಹಿತ್ಯದ ಬೇಸಿಗೆ ಶಿಕ್ಷಣ ಶಿಬಿರವನ್ನು ನಡೆಸಿದಂತೆಯೇ ಈ ವರ್ಷವೂ ಹೈದರಾಬಾದಿನಲ್ಲಿ ನಡೆಸಬೇಕೆಂದೂ ಪ್ರಾಥಮಿಕ ಆಗತ್ಯಗಳ ಮೇಲುಸ್ತುವಾರಿ ಕಾರ್ಯವನ್ನು ಸಲಹಾ ಸಮಿತಿಯ ಶ್ರೀ ಕೆ. ರಾಘವೇಂದ್ರರಾಯರಿಗೆ ವಹಿಸಬೇಕೆಂದೂ ಸಲಹೆನೀಡಲಾಗಿದೆ.

ಹರಿದಾಸ ಸಾಹಿತ್ಯದ ದರ್ಪಣ ಗ್ರಂಥವನ್ನು ಸಿದ್ಧಪಡಿಸಲು ಸರ್ವಶ್ರೀ ಆದ್ಯರಾಮಾಚಾರ್ಯ, ಪ್ರೊ॥ ವಸಂತ ಕುಷ್ಟಗಿ, ಗೋವಿಂದ ಮೂರ್ತಿ ದೇಸಾಯಿ ಇವರ ಒಂದು ಉಪಸಮಿತಿಯನ್ನು ರಚಿಸಬೇಕೆಂದೂ ಸಲಹೆ ನೀಡಲಾಗಿದೆ.

## ಧರ್ಮ ಪ್ರಚಾರ ಪರಿಷತ್ ಬೇಸಿಗೆ ಶಿಕ್ಷಣ ಶಿಬಿರ

ಧರ್ಮ ಪ್ರಚಾರ ಪರಿಷತ್‌ನ ಆಯೋಜಕ ಕಾರ್ಯಕರ್ತರಿಗಾಗಿ ಬೇಸಿಗೆ ಶಿಕ್ಷಣ ಶಿಬಿರವು ತಿರುಪತಿಯಲ್ಲಿ ನಡೆಯಿತು.

ಶಿಕ್ಷಣ ಶಿಬಿರವನ್ನು ಉದ್ಘಾಟಿಸುತ್ತ ಮಾತನಾಡಿದ ತಿ ತಿ ದೇ. ಧರ್ಮಕರ್ತರ ಮಂಡಳಿಯ ಸದಸ್ಯರಾದ ಶ್ರೀ ಐ ಎಲ್. ಎನ್. ಶಾಸ್ತ್ರಿ ಅವರು ಧರ್ಮ ಸಂರಕ್ಷಣೆ, ಪ್ರಸಾರ, ಅಭ್ಯುತ್ಥಾನಗಳಲ್ಲಿ ಧರ್ಮ ಪ್ರಚಾರ ಪರಿಷತ್ ಕಾರ್ಯಕರ್ತರು ಪ್ರಮುಖ ಪಾತ್ರ ವಹಿಸಬೇಕಾದ ಆಗತ್ಯವನ್ನು ಕುರಿತು ವಿವರಿಸಿದರು.

ಉದ್ಘಾಟನಾ ಸಭೆಯ ಅಧ್ಯಕ್ಷತೆ ವಹಿಸಿದ್ದ ತಿ. ತಿ ದೇ. ಗಳ ವಿಶೇಷ ದರ್ಜೆಯ ಡೆಪ್ಯೂಟಿ ಕಾರ್ಯ ನಿರ್ವಹಣಾಧಿಕಾರಿ ಶ್ರೀ ಆರ್. ವಾಸುದೇವನಾಯುಡು ಅವರು ಮಾತನಾಡುತ್ತ ಧರ್ಮ ಪ್ರಚಾರ ಪರಿಷತ್‌ನ ಕಾರ್ಯ ಚಟುವಟಿಕೆಗಳನ್ನು ಹೆಚ್ಚಿಸುವಲ್ಲಿ ಜಿಲ್ಲಾ ಕೇಂದ್ರಗಳಲ್ಲೂ ವಿಶೇಷ ಸಪ್ತಾಹಗಳನ್ನು ಆಚರಿಸಲಾಗುವುದು ಎಂದು ತಿಳಿಸುತ್ತ; ಉತ್ತರದ ಪ್ರಾಂತ್ಯಗಳಲ್ಲೂ ಭಕ್ತಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡರೆ ಚೆನ್ನವೆಂದು ಅಭಿಪ್ರಾಯ ಪಟ್ಟರು

ತಿ. ತಿ. ದೇ. ಸಾರ್ವಜನಿಕ ಸಂಪರ್ಕಾಧಿಕಾರಿ ಡಾ॥ ರಾಮ್ಮುಲ ಸೂರ್ಯನಾರಾಯಣಮೂರ್ತಿ ಅವರು ಧರ್ಮ ಪ್ರಚಾರದಲ್ಲಿ ತಿ. ತಿ. ದೇ. ಕೈಗೆತ್ತಿಕೊಂಡಿರುವ ಪುಸ್ತಕ ಪ್ರಕಟಣೆ, ಕ್ಯಾಸೆಟ್ ಬಿಡುಗಡೆ, ಸಂಗೀತ, ನೃತ್ಯ ಸಭೆಗಳ ಬಗ್ಗೆ ವಿವರಿಸಿದರು. ಎಸ್. ವಿ. ವಿಶ್ವವಿದ್ಯಾಲಯದ ಸಂಸ್ಕೃತ ರೀಡರ್ ಡಾ॥ ಎಸ್. ಬಿ. ರಘುನಾಥಾಚಾರ್ಯರು ಧರ್ಮಗ್ರಂಥಗಳ ಪ್ರಾಮುಖ್ಯ ಹಾಗೂ ಅವುಗಳು ಇಂದಿಗೆ ಹೇಗೆ ಸಂಗತವೆಂಬುದನ್ನು ವಿವರಿಸಿದರು.

ಧರ್ಮ ಪ್ರಚಾರ ಪರಿಷತ್ ಕಾರ್ಯದರ್ಶಿ ಡಾ॥ ಮೇಡಸಾನಿ ಮೋಹನ್ ಅವರು ಸಭೆಯನ್ನು ಸ್ವಾಗತಿಸಿದರು. ಸಹಾಯಕ ಕಾರ್ಯ ನಿರ್ವಹಣಾಧಿಕಾರಿ ಶ್ರೀ ಎ. ಆದಿನಾರಾಯಣ ಅವರು ವಂದನಾರ್ಪಣೆ ಮಾಡಿದರು. ◆

## ಮುಂದಿನ ಸಂಚಿಕೆಯಲ್ಲಿ .... .... ....

**ಸಪ್ತಗಿರಿ. — ಜುಲೈ 1988**

**ವಾಲ್ಮೀಕಿ ಕಂಡ ರಾಮ**
– ವಿ ಡಿ. ಹೆಗಡೆ

**ಗೋಪಾಲದಾಸರ ಸುಳಾದಿಗಳು**
– ಎಸ್. ಪುಷ್ಪ

**ಕಾನಡಾ ವಿಠಲ**
– ಆದ್ಯರಾಮಾಚಾರ್ಯ

**ಸೀಮಂತಿನೀ**
– ಬಿ. ಬಾಲಗಣಪತಿ ಭಟ್ಟ

**ಕುಂಭಕೋಣಂ**
– ಸುಮನಾ ಬದರೀನಾಥ್

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ : ರೂ. 1–00 ಮಾತ್ರ

ವಿಶೇಷ ಸೂಚನೆ: **ಹೊಸದಾಗಿ** ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದದಲ್ಲೂ ಬರೆಯಬೇಕು. ಬರೆಯಿರಿ –
ಸಂಪಾದಕರು.
ತಿ.ತಿ.ದೇ. ತಿರುಪತಿ.

## ತಿಂಗಳಿನ ಮುಖ್ಯದಿನಗಳು

**ಜುಲೈ 1988**

| | | |
|---|---|---|
| 4. | ಸೋಮವಾರ | ತಿರುಚಾನೂರು ಶ್ರೀ ಸುಂದರರಾಜಸ್ವಾಮಿ ಅವತಾರೋತ್ಸವ ಪ್ರಾರಂಭ |
| 6. | ಬುಧವಾರ | ,, ,, ,, ಸಮಾಪ್ತಿ |
| 16. | ಶನಿವಾರ | ದಕ್ಷಿಣಾಯನ ಪ್ರಾರಂಭ; ಆನಿವರ ಆಸ್ಥಾನ |
| 18. | ಸೋಮವಾರ | ಗರುಡ ಪಂಚಮಿ |
| 19. | ಮಂಗಳವಾರ | ಶ್ರೀ ಕಲ್ಯಾಣವೆಂಕಟೇಶ್ವರಸ್ವಾಮಿ ಸಾಕ್ಷಾತ್ಕಾರ ವೈಭವ |
| 28. | ಗುರುವಾರ | ಶ್ರೀ ಆಳವಂದಾರ್ ವರ್ಷ ತಿರುನಕ್ಷತ್ರ |

## ಚಂದಾದಾರರಲ್ಲಿ ಒಂ
## ಮನವಿ

ಕನ್ನಡ ಸಪ್ತಗಿರಿಯ ನೇರ ಚಂದಾದಾ ಜುಲೈ 1988 ಕ್ಕೆ ಚಂದಾ ಅವಧಿ ಯುವ ಚಂದಾ ಕ್ರಮಸಂಖ್ಯೆಗಳನ್ನು ಕೆಳ ಲಾಗಿದೆ. ಚಂದಾದಾರರು ದಯವಿಟ್ಟು ಮುಂದಿನ ಚಂದಾ ಹಣವನ್ನು ಕೂಡಲೇ ಮಾಡಬೇಕೆಂದು ವಿನಂತಿ.

115, 170, 171, 241, 245, 252, 362, 367, 368, 370 376, 467, 486, 910, 921, 926, 928, 929, 934, 945, 948, 950, 951, 955, 956, 1568, 1570 ರಿಂದ 1573, 1 1576, 1578 ರಿಂದ 1599, 1603, 1604, 1606. 1611, 1(

ಚಂದಾ ಹಣವನ್ನು ಕಳುಹಿಸುವ ದಾರರು ತಮ್ಮ ಚಂದಾ ಸಂಖ್ಯೆಯನ್ನು ಸ್ಪಷ್ಟವಾಗಿ ಬರೆಯಬೇಕು. ವಿಳಾಸವನ್ನ ಯಾದ ದಪ್ಪ ಅಕ್ಷರಗಳಲ್ಲಿ ಬರೆಯಿರಿ.ವಿಳಾ ಲಾವಣೆಯನ್ನು ತಿಳಿಸುವಾಗ ಚಂದಾ ಸಂಖ್ಯೆಯನ್ನೂ, ಹೊಸವಿಳಾಸವನ್ನೂ ವಾಗಿ ಬರೆಯಬೇಕೆಂದು ವಿನಂತಿಸಲಾಗಿ

**ಸಂಪಾದಕರು, ಸ**
**ತಿ. ತಿ. ದೇ. ತಿರು**

## ಋಗ್ವೇದ

ಮೂಲ—ತೆಲುಗು ವ್ಯಾಖ್ಯಾನ.

ನಾಲ್ಕು ಸಂಪುಟಗಳು ಗಡೆಯಾಗಿವೆ. ತಿ. ತಿ. ದೇ. ಸಮಾ ಕೇಂದ್ರಗಳಲ್ಲೆಲ್ಲ ಪ್ರತಿಗಳು ದೊ ತ್ತವೆ. ಪ್ರತಿಸಂಪುಟದ ಬೆಲೆ ರೂ ಮಾತ್ರ.

ಕೂಡಲೇ ನಿಮ್ಮ ಬಳಿಯ ತಿ. ತಿ ಸಮಾಚಾರ ಕೇಂದ್ರದಲ್ಲಿ ವಿಚಾರಿಸಿ

Edited and Published on behalf of the T T. Devasthanams by K. Subba Rao, M.A., and Printed at
T. T. D. Press by M. Vijayakumar Reddy, Manager, T. T. D. Press, Tirupati – 517501.



Sri V. Nageswara Rao, Minister for Agriculture, A.P. participating as Chief Guest.

AT VIJAYAWADA



The Minister receiving the memento from Sri S.K. Jaya Chandra, I.P.S., Security Officer, T.T.D.



Sri J. Bapu Reddy, Commissioner Endowments, A.P. participating as Chief Guest.

AT KAKINADA



Gita International Party's Dance Programme



Prof. Veeraiah, S.V. University participating as Chief Guest

AT TIRUPATI



The Utsavamurthi of Sri Govindaraja Swamy Temple at Annamacharya Kala Mandiram.

Regd. No. H / TRP / 14

ವಾರ್ಷಿಕ ಚಂದಾ ರೂ. 12-00

ಸಂದರ್ಶಿಸಿ ಆನಂದಿಸಿ



# ಶ್ರೀನಿವಾಸ ಮಂಗಾಪುರ

## ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಸಾಕ್ಷಾತ್ಕಾರ ವೈಭವ

**19-7-1988**